WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೨, ೨೦೧೧ (ಮಾರ್ಗಶಿರ ೧೧, ಶಕ ವರ್ಷ ೧೯೩೩) | ನಂ. ೯೫೧ |
|---|---|---|

### ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಲೋಇ:283:ಸೇಸಕಿ:11, ಬೆಂಗಳೂರು, ದಿನಾಂಕ: 1.12.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ:98:ಸೇಸಕಿ:08, ದಿನಾಂಕ: 15.11.2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಜಿ.ಇಂದ್ರಕುಮಾರ್, ಸಹಾಯಕ ಇಂಜಿನಿಯರ್ ಇವರ ಜೇಷ್ಠತೆಯನ್ನು 3773ಕ್ಕೆ ಬದಲಾಗಿ 3852–A ಎಂದು ತಿದ್ದುಪಡಿ ಮಾಡಿ ಕೆಳಕಂಡಂತೆ ನಿಗದಿಪಡಿಸಿದೆ.

| Ranking No. | Provision AE. GRD. No. | Name of the Engineer | SC/ ST | Date of Birth | Date of Entry into Service | Date of Regular Appointment to the Cadre | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3852-A | | Indra Kumar G. | | 23-Nov-1969 | 5-June 1989 | 17-Apr-2001<br>03-Sep-2000* | CC |

* He Shall be entitled to count his seniority from the notational date, only for the purpose of consideration for promotion to the post of Assistant Executive Engineer (Division-I).

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್.ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಲೋಕೋಪಯೋಗಿ ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

## ವಿಶೇಷ ಪತ್ರಿಕೆ

| ಭಾಗ - III | ಬೆಂಗಳೂರು, ಶನಿವಾರ, ಡಿಸೆಂಬರ್ ೩, ೨೦೧೧ (ಮಾರ್ಗಶಿರ ೧೨, ಶಕ ವರ್ಷ ೧೯೩೩) | ನಂ. ೯೫೩ |
|---|---|---|

### ಜಿಲ್ಲಾಧಿಕಾರಿಗಳ ಕಾರ್ಯಾಲಯ, ರಾಮನಗರ ಜಿಲ್ಲೆ, ರಾಮನಗರ

**ಅಧಿಸೂಚನೆ**

**ನಂ. ಇಎಲ್‌ಎನ್(ಪಂ)ಸಿಆರ್/72/2011–12, ದಿನಾಂಕ: 01 ಡಿಸೆಂಬರ್ 2011**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 5ರ ಉಪಪ್ರಕರಣ (5) ರಂತೆ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಪ್ರಕರಣ 5(2)(3)(4)ರಂತೆ ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿನ ತಗ್ಗಿಕುಪ್ಪೆ ಮತ್ತು ಬಿಳಿಗುಂಬ ಗ್ರಾಮ ಪಂಚಾಯತಿಗೆ

ಕೋಷ್ಟಕ–1ರಲ್ಲಿ ಗ್ರಾಮ ಪಂಚಾಯತಿಗಳ ಕ್ಷೇತ್ರಗಳನ್ನು ಹಾಗೂ ಆ ಕ್ಷೇತ್ರಕ್ಕೆ ನಿಗದಿಪಡಿಸಿರುವ ಮೀಸಲು ಸ್ಥಾನಗಳನ್ನು ಕೋಷ್ಟಕ–2 ಮತ್ತು ಕೋಷ್ಟಕ–3ರಲ್ಲಿ ಮೀಸಲಿಡದ ಕ್ಷೇತ್ರ ಹಾಗೂ ಸ್ಥಾನಗಳನ್ನು ನಮೂದಿಸಿ, ಈ ಕಾರ್ಯಾಲಯದ ಅಧಿಸೂಚನೆ ಸಂ:ಇಎಲ್ಎನ್.(ಪಂ)ಸಿಆರ್.44/2009–10, ದಿ: 18/01/2010ರಲ್ಲಿ ಅಧಿಸೂಚಿಸಲಾಗಿದೆ.

ಸರ್ಕಾರದ ಅಧಿಸೂಚನೆ ಸಮ: ಸಂವ್ಯಾಶಾಇ.03.ಶಾಸನ.2010 ದಿ: 23/07/2010ರಲ್ಲಿ ಕರ್ನಾಟಕ ಪಂಚಾಯತ್ ರಾಜ್ (ತಿದ್ದುಪಡಿ) ಅಧಿನಿಯಮ 2010 ಜಾರಿಗೆ ತಂದಿದ್ದು, ಪ್ರಕರಣ 5 ಉಪ ಪ್ರಕರಣ(4)ಕ್ಕೆ ತಿದ್ದುಪಡಿ ಮಾಡಲಾಗಿದೆ. ಇದು ತತ್‌ಕ್ಷಣದಿಂದ ಜಾರಿಗೆ ಬಂದಿರುತ್ತದೆ. ಸದರಿ ತಿದ್ದುಪಡಿಯಂತೆ ಪ್ರತಿಯೊಂದು ವರ್ಗಕ್ಕೂ ಮೀಸಲಿಟ್ಟಿರುವ ಸ್ಥಾನಗಳಲ್ಲಿ ಮತ್ತು ಮೀಸಲಿಡದ ಸ್ಥಾನಗಳಲ್ಲಿ "ಮೂರನೇ ಒಂದರಷ್ಟಕ್ಕೆ" ಬದಲಾಗಿ "ಶೇಕಡಾ ಐವತ್ತರಷ್ಟಕ್ಕೆ" ಕಡಿಮೆ ಇಲ್ಲದಷ್ಟು ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಿಡಬೇಕಾಗಿರುತ್ತದೆ.

ಸರ್ಕಾರವು ಅಧಿಸೂಚನೆ ಸಂ: ವ್ಯಾಶಾಇ.40 ಶಾಸನ.2010 ದಿ: 16/07/2011ರಲ್ಲಿ ಕರ್ನಾಟಕ ಪಂಚಾಯತ್ ರಾಜ್ (ತಿದ್ದುಪಡಿ) ಅಧಿನಿಯಮ 2011 ಜಾರಿಗೆ ತಂದಿದ್ದು, ಪ್ರಕರಣ 5 ಉಪ ಪ್ರಕರಣ(3)ಕ್ಕೆ ತಿದ್ದುಪಡಿ ಮಾಡಲಾಗಿದೆ. ಇದು 2010ರ ಅಕ್ಟೋಬರ್ 4ನೇ ದಿನಾಂಕದಿಂದ ಜಾರಿಗೆ ಬಂದಿರುತ್ತದೆ. ಸದರಿ ತಿದ್ದುಪಡಿಯಂತೆ ಈ ಉಪ ಪ್ರಕರಣದ ಅಡಿಯಲ್ಲಿ ಹಿಂದುಳಿದ ವರ್ಗಗಳಿಗೆ ಹಾಗೆ ನಿರ್ಧರಿಸಿ ಮೀಸಲಿರಿಸಿದ ಸ್ಥಾನಗಳ ಒಟ್ಟು ಸಮಖ್ಯೆಯು (2) ನೇ ಉಪ ಪ್ರಕರಣದ ಅಡಿಯಲ್ಲಿ ಅನುಸೂಚಿತ ಜಾತಿಗಳು ಹಾಗೂ ಅನುಸೂಚಿತ ಪಂಗಡಗಳಿಗಾಗಿ ಮತ್ತು ಈ ಉಪಪ್ರಕರಣದಡಿಯಲ್ಲಿ ಹಿಂದುಳಿದ ವರ್ಗಗಳಿಗಾಗಿ ಮೀಸಲಿರಿಸಿದ ಸ್ಥಾನಗಳ ಒಟ್ಟು ಸಂಖ್ಯೆಯು ಆ ಗ್ರಾಮ ಪಂಚಾಯತಿಯಲ್ಲಿನ ಸ್ಥಾನಗಳ ಒಟ್ಟು ಸಂಖ್ಯೆಯ "ಶೇಕಡಾ ಐವತ್ತನ್ನು" ಮೀರತಕ್ಕದ್ದಲ್ಲವೆಂದು ಇರುತ್ತದೆ.

ಆದುದರಿಂದ ಪ್ರಕರಣ 5(3) ಮತ್ತು 5(4)ರ ತಿದ್ದುಪಡಿಯಂತೆ ಹಾಗೂ ರಾಜ್ಯ ಚುನಾವಣಾ ಆಯೋಗದ ನಿರ್ದೇಶನಕ್ಕನುಸಾರ ಅವಧಿ ಮುಕ್ತಾಯವಾಗದೇ ಚುನಾವಣೆ ನಡೆಸಲು ಬಾಕಿ ಇರುವ ಈ ಕೆಳಕಂಡ ಗ್ರಾಮ ಪಂಚಾಯತಿಗೆ ತಿದ್ದುಪಡಿ ಮಾಡುವುದು ಅವಶ್ಯಕವಾಗಿದೆ.

ಪ್ರಯುಕ್ತ ದಿ: 18/01/2010ರಂದು ಹೊರಡಿಸಿರುವ ಅಧಿಸೂಚನೆಯ ಕೋಷ್ಟಕ–1. 2 ಮತ್ತು 3ನ್ನು ರದ್ದುಪಡಿಸಿ, ಹೊಸದಾಗಿ ಈ ಮುಂದಿನಂತೆ ಕೋಷ್ಟಕ–1, 2 ಮತ್ತು 3ನ್ನು ಅಧಿಸೂಚಿಸಿದೆ.

**ಕೋಷ್ಟಕ – 1**

**ಗ್ರಾಮ ಪಂಚಾಯತಿ ಸಂಖ್ಯೆ: ಮತ್ತು ಹೆಸರು :– 02 ಬಿಳಗುಂಬ** **ತಾಲ್ಲೂಕು: ಮಾಗಡಿ**

**ಪ್ರಾದೇಶಿಕ ಚುನಾವಣಾ ಕ್ಷೇತ್ರಗಳ ಸಂ: 7**

| ಕ್ರ. ಸಂ | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ | ಹಂಚಿಕೆಯಾಗಿರುವ ಸ್ಥಾನಗಳು |
|---|---|---|---|
| 1 | ಬಿಳಗುಂಬ | ಬಿಳಗುಂಬ, ತೊರೆಪಾಳ್ಯ ಆನಂದನಗರ ದೊಡ್ಡನರಸಯ್ಯನಪಾಳ್ಯ ಬ್ಯಾಡರಹಳ್ಳಿ | 4 |
| 2 | ಹರ್ತಿ | ಹರ್ತಿ, ಹೊನ್ನಸಿದ್ದೇಗೌಡನಪಾಳ್ಯ, ಕೆರೆಕೋಡಿಪಾಳ್ಯ, ಹನುಮಂತಯ್ಯನಪಾಳ್ಯ.ಹೆಬ್ಬಾಳಪಾಳ್ಯ, ಅರೇಪಾಳ್ಯ, ಬಿ.ನಾರಾಯಣಪುರ | 3 |
| 3 | ಚಲುವಯ್ಯನಪಾಳ್ಯ | ಚಲುವಯ್ಯನಪಾಳ್ಯ, ಬೋಡಿಗನಪಾಳ್ಯ, ಪೋತಯ್ಯನಪಾಳ್ಯ, ಬೆಣಚಲ್ಲುಪಾಳ್ಯ, ರಂಗಯ್ಯನಪಾಳ್ಯ ,ಈರಯ್ಯನಪಾಳ್ಯ | 1 |
| 4 | ತಿಮ್ಮಸಂದ್ರ | ತಿಮ್ಮಸಂದ್ರ, ಕಲ್ಲೇಂಟೆಪಾಳ್ಯ, ಹಿಪ್ಪೆಮರದಪಾಳ್ಯ, ಜೀವಿಪಾಳ್ಯ, ಕೋಟ್ಟಪ್ಪನಪಾಳ್ಯ, ಪಣಕನಕಲ್ಲು | 2 |
| 5 | ಭಂಟರಕುಪ್ಪೆ | ಭಂಟರಕುಪ್ಪೆ, ತೊರೆಚನ್ನೋಹಳ್ಳಿ, ಹರಿಜನಕಾಲೋನಿ, ತೊರೆರಾಂಪುರ | 2 |
| 6 | ಗುಡೆಪಾಳ್ಯ | ಗುಡೆಪಾಳ್ಯ, ರಂಗೇನಹಳ್ಳಿ, ಮಡಿಪಾಳರಪಾಳ್ಯ | 1 |
| 7 | ಸಿಡಗನಹಳ್ಳಿ | ಸಿಡಗನಹಳ್ಳಿ, ಕದರಯ್ಯನಪಾಳ್ಯ, ಚಿಕ್ಕಪ್ಪಯ್ಯನಪಾಳ್ಯ,ಬುಡ್ಡಯ್ಯನಪಾಳ್ಯ, ಮುತ್ತರಾಯನಗುಡಿಪಾಳ್ಯ, ಕಂಚುಗಾರನಹಳ್ಳಿ | 3 |
| | | **ಒಟ್ಟು** | **16** |

**ಕೋಷ್ಟಕ – 2**

**ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು, ಹಿಂದುಳಿದ ವರ್ಗಗಳ " ಅ" ಮತ್ತು "ಬ" ವರ್ಗಗಳಿಗೆ ಸೇರಿದವರಿಗಾಗಿ ಮೀಸಲಿರಿಸಿದ ಮತ್ತು ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳ " ಅ" ಮತ್ತು "ಬ"ವರ್ಗಗಳಿಗೆ ಸೇರಿದವರಿಗಾಗಿ ಹಾಗೆ ಮೀಸಲಿರಿಸದಿರುವ ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಮೀಸಲಿರಿಸಿದ ಪ್ರಾದೇಶಿಕ ಚುನಾವಣಾ ಕ್ಷೇತ್ರಗಳು.**

| ಕ್ರ. ಸಂ | ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳಿಗೆ ಸೇರಿದವರಿಗಾಗಿ ಮೀಸಲಿಸಲಾದ ಚುನಾವಣಾ ಕ್ಷೇತ್ರಗಳು | ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಸ್ಥಾನಗಳು, ಮಹಿಳೆಯರಿಗಾಗಿ ಮೀಸಲಿರಿಸದ ಚುನಾವಣಾ ಕ್ಷೇತ್ರಗಳು |
|---|---|---|
| **ಪರಿಶಿಷ್ಟ ಜಾತಿಗಳು** | | |
| 1 | ಬೆಳಗುಂಬ | ಬೆಳಗುಂಬ |
| 2 | ಹರ್ತಿ | ಹರ್ತಿ |
| 3 | ಬಂಟರಕುಪ್ಪೆ | – |
| 4 | ಸಿಡಗನಹಳ್ಳಿ | – |
| **ಪರಿಶಿಷ್ಟ ಪಂಗಡಗಳು** | | |
| 1 | ಗುಡ್ಡೇಪಾಳ್ಯ | ಗುಡ್ಡೇಪಾಳ್ಯ |
| **ಹಿಂದುಳಿದ ವರ್ಗಗಳ "ಎ" ಗುಂಪು** | | |
| 1 | ಬೆಳಗುಂಬ | ಬೆಳಗುಂಬ |
| 2 | ತಿಮ್ಮಸಂದ್ರ | ತಿಮ್ಮಸಂದ್ರ |
| **ಹಿಂದುಳಿದ ವರ್ಗಗಳ "ಬ" ಗುಂಪು** | | |
| 1 | ಸಿಡಗನಹಳ್ಳಿ | – |

**ಕೋಷ್ಟಕ–3**

**ಪ್ರಾದೇಶಿಕ ಚುನಾವಣಾ ಕ್ಷೇತ್ರದಲ್ಲಿ ಮೀಸಲಿಡದ ಸ್ಥಾನಗಳ ಪೈಕಿ ಮಹಿಳೆಯರಿಗೆ ಮೀಸಲಾಗಿಟ್ಟ ಸ್ಥಾನಗಳು**

| ಕ್ರ. ಸಂ | ಸ್ಥಾನಗಳನ್ನು ಮೀಸಲಿಡದ ಚುನಾವಣಾ ಕ್ಷೇತ್ರಗಳ ಹೆಸರು | ಮೀಸಲಿಡದ ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಮೀಸಲಿಟ್ಟಿರುವ ಚುನಾವಣಾ ಕ್ಷೇತ್ರಗಳ ಹೆಸರು |
|---|---|---|
| 1 | ಬೆಳಗುಂಬ | – |
| 2 | ಬೆಳಗುಂಬ | – |
| 3 | ಹರ್ತಿ | ಹರ್ತಿ |
| 4 | ಹರ್ತಿ | – |
| 5 | ಚಲುವಯ್ಯನಪಾಳ್ಯ | ಚಲುವಯ್ಯನಪಾಳ್ಯ |
| 6 | ತಿಮ್ಮಸಂದ್ರ | – |
| 7 | ಬಂಟರಕುಪ್ಪೆ | ಬಂಟರಕುಪ್ಪೆ |
| 8 | ಸಿಡಗನಹಳ್ಳಿ | ಸಿಡಗನಹಳ್ಳಿ |

**ಎಸ್. ಪುಟ್ಟಸ್ವಾಮಿ, ಭಾ.ಆ.ಸೇ**
ಜಿಲ್ಲಾಧಿಕಾರಿಗಳು
ರಾಮನಗರ ಜಿಲ್ಲೆ.

**ಕೋಷ್ಟಕ–1**

**ಗ್ರಾಮ ಪಂಚಾಯತಿ ಸಂಖ್ಯೆ ಮತ್ತು ಹೆಸರು :– 03 ತಗ್ಗೀಕುಪ್ಪೆ** **ತಾಲ್ಲೂಕು: ಮಾಗಡಿ**
**ಪ್ರಾದೇಶಿಕ ಕ್ಷೇತ್ರಗಳ ಸಂ: 07**

| ಕ್ರಸಂ | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ | ಹಂಚಿಕೆಯಾಗಿರುವ ಸ್ಥಾನಗಳು |
|---|---|---|---|
| 1 | ತಗ್ಗೀಕುಪ್ಪೆ | ತಗ್ಗೀಕುಪ್ಪೆ, ತಗ್ಗೀಕುಪ್ಪೆ ಕಾಲೋನಿ, ಕುರುಬರಪಾಳ್ಯ, ಮೋಟೇಗೌಡನಪಾಳ್ಯ, | 3 |
| 2 | ಬೈಚಾಪುರ | ಬೈಚಾಪುರ, ಕೆಬ್ಬೆಪಾಳ್ಯ, ಕೆಂಪಯ್ಯನಪಾಳ್ಯ, ದೊಡ್ಡರಂಗಯ್ಯನ ಪಾಳ್ಯ, ಕಕ್ಕಪನಪಾಳ್ಯ, ಬೆಟ್ಟದಾಸಿಪಾಳ್ಯ, ಕರಗದಹಳ್ಳಿ, | 4 |
| 3 | ಹೊಸಹಳ್ಳಿ | ಹೊಸಹಳ್ಳಿ, ದಾಸಪ್ಪನಪಾಳ್ಯ, ಚಿಕ್ಕಯ್ಯನಪಾಳ್ಯ, ಯಲ್ಲಯ್ಯನಪಾಳ್ಯ, ಹರಿಸಿಂಗಪಾಳ್ಯ, ಅರೆಶಂಕರಮಠ, | 2 |
| 4 | ಬ್ಯಾಲಕೆರೆ | ಬ್ಯಾಲಕೆರೆ, ಜನತಾಕಾಲೋನಿ, ಶಾಂತಿಗ್ರಾಮ, ರಾಣೋಜಿಪಾಳ್ಯ | 3 |
| 5 | ನಾಗಶೆಟ್ಟಿಹಳ್ಳಿ | ನಾಗಶೆಟ್ಟಿಹಳ್ಳಿ, ಗೊಲ್ಲರಹಟ್ಟಿ | 1 |
| 6 | ದುಬ್ಬಗೊಟ್ಟಿಗೆ | ದುಬ್ಬಗೊಟ್ಟಿಗೆ, ಮದಲಾರಯ್ಯನಪಾಳ್ಯ, ಕಲ್ಲಯ್ಯನಪಾಳ್ಯ, ಜೋಗಿಪಾಳ್ಯ, ಸಿಂಗ್ರಿಪಾಳ್ಯ, ವಸಿರುಮಾವಿನಕಟ್ಟೆ(ಬೇ) | 3 |
| 7 | ಯಾಗನಹಳ್ಳಿ | ಯಾಗನಹಳ್ಳಿ, ಸಿದ್ದಯ್ಯನಪಾಳ್ಯ | 1 |
| | | **ಒಟ್ಟು** | **17** |

**ಕೋಷ್ಟಕ – 2**

**ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು, ಹಿಂದುಳಿದ ವರ್ಗಗಳ " ಅ" ಮತ್ತು "ಬ" ವರ್ಗಗಳಿಗೆ ಸೇರಿದವರಿಗಾಗಿ ಮೀಸಲಿರಿಸಿದ ಮತ್ತು ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳ " ಅ" ಮತ್ತು "ಬ" ವರ್ಗಗಳಿಗೆ ಸೇರಿದವರಿಗಾಗಿ ಹಾಗೆ ಮೀಸಲಿರಿಸದಿರುವ ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಮೀಸಲಿರಿಸಿದ ಪ್ರಾದೇಶಿಕ ಚುನಾವಣಾ ಕ್ಷೇತ್ರಗಳು.**

| ಕ್ರ. ಸಂ | ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳಿಗೆ ಸೇರಿದವರಿಗಾಗಿ ಮೀಸಲಿಸಲಾದ ಚುನಾವಣಾ ಕ್ಷೇತ್ರಗಳು | ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಸ್ಥಾನಗಳು, ಮಹಿಳೆಯರಿಗಾಗಿ ಮೀಸಲಿರಿಸದ ಚುನಾವಣಾ ಕ್ಷೇತ್ರಗಳು |
|---|---|---|
| | **ಪರಿಶಿಷ್ಟ ಜಾತಿಗಳು** | |
| 1 | ಬೈಚಾಪುರ | – |
| 2 | ಹೊಸಹಳ್ಳಿ | – |
| 3 | ಬ್ಯಾಲಕೆರೆ | ಬ್ಯಾಲಕೆರೆ |
| 4 | ನಾಗಶೆಟ್ಟಿಹಳ್ಳಿ | ನಾಗಶೆಟ್ಟಿಹಳ್ಳಿ |
| 5 | ದುಬ್ಬಗೊಟ್ಟಿಗೆ | ದುಬ್ಬಗೊಟ್ಟಿಗೆ |
| | **ಪರಿಶಿಷ್ಟ ಪಂಗಡಗಳು** | |
| 1 | ಬೈಚಾಪುರ | ಬೈಚಾಪುರ |
| | **ಹಿಂದುಳಿದ ವರ್ಗಗಳ "ಎ" ಗುಂಪು** | |
| 1 | ತಗ್ಗಿಕುಪ್ಪೆ | – |
| 2 | ಬೈಚಾಪುರ | ಬೈಚಾಪುರ |
| | **ಹಿಂದುಳಿದ ವರ್ಗಗಳ "ಬಿ" ಗುಂಪು** | |
| – | – | – |

**ಕೋಷ್ಟಕ – 3**

**ಪ್ರಾದೇಶಿಕ ಚುನಾವಣಾ ಕ್ಷೇತ್ರದಲ್ಲಿ ಮೀಸಲಿಡದ ಸ್ಥಾನಗಳ ಪೈಕಿ ಮಹಿಳೆಯರಿಗೆ ಮೀಸಲಾಗಿಟ್ಟ ಸ್ಥಾನಗಳು**

| ಕ್ರ. ಸಂ | ಸ್ಥಾನಗಳನ್ನು ಮೀಸಲಿಡದ ಚುನಾವಣಾ ಕ್ಷೇತ್ರಗಳ ಹೆಸರು | ಮೀಸಲಿಡದ ಸ್ಥಾನಗಳ ಪೈಕಿ ಮಹಿಳೆಯರಿಗಾಗಿ ಮೀಸಲಿಟ್ಟಿರುವ ಚುನಾವಣಾ ಕ್ಷೇತ್ರಗಳ ಹೆಸರು |
|---|---|---|
| 1 | ತಗ್ಗೀಕುಪ್ಪೆ | – |
| 2 | ತಗ್ಗೀಕುಪ್ಪೆ | ತಗ್ಗೀಕುಪ್ಪೆ |
| 3 | ಬೈಚಾಪುರ | – |
| 4 | ಹೊಸಹಳ್ಳಿ | ಹೊಸಹಳ್ಳಿ |
| 5 | ಬ್ಯಾಲಕೆರೆ | – |
| 6 | ಬ್ಯಾಲಕೆರೆ | ಬ್ಯಾಲಕೆರೆ |
| 7 | ದುಬ್ಬಗೊಟ್ಟಿಗೆ | – |
| 8 | ದುಬ್ಬಗೊಟ್ಟಿಗೆ | ದುಬ್ಬಗೊಟ್ಟಿಗೆ |
| 9 | ಯಾಗನಹಳ್ಳಿ | ಯಾಗನಹಳ್ಳಿ |

**ಎಸ್. ಪುಟ್ಟಸ್ವಾಮಿ, ಭಾ.ಆ.ಸೇ**
ಜಿಲ್ಲಾಧಿಕಾರಿಗಳು
ರಾಮನಗರ ಜಿಲ್ಲೆ.

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಡಿಸೆಂಬರ್ ೧೪, ೨೦೧೧ (ಮಾರ್ಗಶಿರ ೨೩, ಶಕ ವರ್ಷ ೧೯೩೩) | ನಂ. ೯೮೦ |
|---|---|---|

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:ವಿಪವಿ–09:2011, ಬೆಂಗಳೂರು, ದಿನಾಂಕ : 14.12.2011**

ಈ ಮುಂದಿನ ವಿಧೇಯಕವನ್ನು ವಿಧಾನ ಪರಿಷತ್ತಿನಲ್ಲಿ ದಿನಾಂಕ: 14ನೇ ಡಿಸೆಂಬರ್, 2011 ರಂದು ಮಂಡಿಸಲಾಯಿತು.

## ಕರ್ನಾಟಕ ವಿಧಾನ ಪರಿಷತ್ತು

**ನೂರ ಹದಿನಾರನೆಯ ಅಧಿವೇಶನ**

**ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ಎರಡನೇ ತಿದ್ದುಪಡಿ) ವಿಧೇಯಕ, 2011**

**(2011ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 09)**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ನ್ನು (2001ರ ಕರ್ನಾಟಕ ಅಧಿನಿಯಮ 33) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ಎರಡನೇ ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 1ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ (2001ರ ಕರ್ನಾಟಕ ಅಧಿನಿಯಮ 33) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 1ನೇ ಪ್ರಕರಣದಲ್ಲಿ, (4)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಇದು, 23ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿಸಿದ ಎಲ್ಲಾ ಧಾರ್ಮಿಕ ಸಂಸ್ಥೆಗಳು ಅಥವಾ ಧರ್ಮಾದಾಯ ದತ್ತಿಗಳಿಗೆ ಅನ್ವಯವಾಗತಕ್ಕದ್ದು. 23ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿಸಿದವುಗಳನ್ನು ಹೊರತುಪಡಿಸಿ ಎಲ್ಲ ಧಾರ್ಮಿಕ ಸಂಸ್ಥೆಗಳು ಅಥವಾ ಧರ್ಮಾದಾಯ ದತ್ತಿಗಳಿಗೆ 53ನೇ ಪ್ರಕರಣ ಮತ್ತು ಅಧ್ಯಾಯ VIII ಅನ್ವಯವಾಗತಕ್ಕದ್ದು:

ಪರಂತು, ಇದು ಒಂದು ಮಠಕ್ಕೆ ಅಥವಾ ಮಠಕ್ಕೆ ಸೇರಿದ ಅಥವಾ ಅದು ನಿರ್ವಹಿಸುತ್ತಿರುವ ದೇವಸ್ಥಾನಕ್ಕೆ ಅನ್ವಯವಾಗತಕ್ಕದ್ದಲ್ಲ."

**3. 2ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ (2)ನೇ ಪ್ರಕರಣದಲ್ಲಿ,–

(1) (2)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) 'ಅರ್ಚಕ' ಎಂದರೆ, ಅರ್ಚನೆ, ಪೂಜೆ ಮತ್ತು ಇತರ ಧಾರ್ಮಿಕ ವಿಧಿಗಳನ್ನು ನೆರವೇರಿಸುವ ಅಥವಾ ನಡೆಸುವ ಪ್ರಧಾನ ಅರ್ಚಕ, ಸಹಾಯಕ ಅರ್ಚಕ, ಪೂಜಾರಿ ಅಥವಾ ಯಾವುದೇ ಹೆಸರಿನಿಂದ ಕರೆಯಲ್ಪಡುವ ಇತರ ವ್ಯಕ್ತಿಯನ್ನು ಒಳಗೊಳ್ಳುತ್ತದೆ;"

(2) (15)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(15) "ವಂಶಪಾರಂಪರ್ಯ ಪದಧಾರಕ" ಮತ್ತು "ವಂಶಪಾರಂಪರ್ಯ ನ್ಯಾಸಧಾರಿ" ಎಂದರೆ, ಉತ್ತರಾಧಿಕಾರದ ಕಾನೂನಿಗೆ ಅನುಸಾರವಾಗಿ ಅಥವಾ ಯಾವುದೇ ನ್ಯಾಯಾಲಯದಿಂದ ಅಥವಾ ಶಾಸನಬದ್ಧ ಪ್ರಾಧಿಕಾರದಿಂದ ಹಾಗೆಂದು ಘೋಷಿಸಲಾದ ಅಥವಾ ಯಾವುದೇ ಅಧಿನಿಯಮದ ಅಡಿಯಲ್ಲಿ ಹಾಗೆ ದಾಖಲಿಸಲಾದ, ಹಿಂದು ಧಾರ್ಮಿಕ ಸಂಸ್ಥೆಗಳು ಅಥವಾ ಧರ್ಮಾದಾಯ ದತ್ತಿಗಳ ಪದದ ಉತ್ತರಾಧಿಕಾರ ಪ್ರಾಪ್ತವಾಗುವಂಥ ಪದಧಾರಕ ಮತ್ತು ನ್ಯಾಸಧಾರಿ."

**4. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ "ರಾಜ್ಯ ಸರ್ಕಾರವು" ಎಂಬ ಪದಗಳ ತರುವಾಯ "ಅಥವಾ ರಾಜ್ಯ ಧಾರ್ಮಿಕ ಪರಿಷತ್ತು" ಎಂಬ ಪದಗಳನ್ನು ಸೇರಿಸತಕ್ಕದ್ದು.

**5. 19ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 19ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ (ಎಲ್) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎಂ) ಹಿಂದೂ ಧಾರ್ಮಿಕ ಸಂಸ್ಥೆಗಳು ಅಥವಾ ಯಾವುದೇ ಹಿಂದೂ ಸಂಘಟನೆಯು ಗೋಶಾಲೆಗಳನ್ನು ಸ್ಥಾಪಿಸುವುದು ಮತ್ತು ಪ್ರೋತ್ಸಾಹಿಸುವುದು;

(ಎನ್) ಅಧಿನಿಯಮದ ಉದ್ದೇಶಗಳನ್ನು ನೆರವೇರಿಸುವುದು."

**6. Vನೇ ಅಧ್ಯಾಯದ ತಿದ್ದುಪಡಿ.–** ಮೂಲ ಅಧಿನಿಯಮದ ಅಧ್ಯಾಯ–Vರ ಶೀರ್ಷಿಕೆಯಲ್ಲಿ "ಸಲಹಾ ಸಮಿತಿ" ಎಂಬ ಪದಗಳಿಗೆ "ಧಾರ್ಮಿಕ ಪರಿಷತ್ತುಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**7. 20ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 20ನೇ ಪ್ರಕರಣದ (1)ನೇ ಉಪಪ್ರಕರಣದ (ಡಿ) ಖಂಡದಲ್ಲಿ, "ಮೂರು ವರ್ಷಗಳ" ಎಂಬ ಪದಗಳಿಗೆ "ನಾಲ್ಕು ವರ್ಷಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**8. 20ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 20ಎ ಪ್ರಕರಣದಲ್ಲಿ,–

(1) (2)ನೇ ಉಪಪ್ರಕರಣದಲ್ಲಿ,–

(i) (i)ನೇ ಖಂಡದಲ್ಲಿ "ಹತ್ತು ಲಕ್ಷ ರೂಪಾಯಿಗಳು" ಎಂಬ ಪದಗಳಿಗೆ "ಇಪ್ಪತ್ತೈದು ಲಕ್ಷ ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (vi)ನೇ ಖಂಡದಲ್ಲಿ "ಹತ್ತು ಲಕ್ಷ ರೂಪಾಯಿಗಳು" ಎಂಬ ಪದಗಳಿಗೆ "ಇಪ್ಪತ್ತೈದು ಲಕ್ಷ ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(2) (2)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಎಲ್ಲಾ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಆಡಳಿತವು ರಾಜ್ಯ ಧಾರ್ಮಿಕ ಪರಿಷತ್ತಿನ ಸಾಮಾನ್ಯ ಮೇಲ್ವಿಚಾರಣೆಯ ಮತ್ತು ನಿಯಂತ್ರಣದ ಅಡಿಯಲ್ಲಿ ಇರತಕ್ಕದ್ದು ಮತ್ತು ಅಂಥ ಮೇಲ್ವಿಚಾರಣೆ ಹಾಗೂ ನಿಯಂತ್ರಣವು, ಅಂಥ ಸಂಸ್ಥೆಗಳು ಮತ್ತು ದತ್ತಿಗಳು ಉಚಿತ ರೀತಿಯಲ್ಲಿ ಆಡಳಿತ ನಡೆಸಲ್ಪಡುತ್ತಿವೆ ಹಾಗೂ ಅವುಗಳ ಆದಾಯವು, ಅವುಗಳು ಸ್ಥಾಪನೆಯಾಗಿರುವ ಅಥವಾ ಅಸ್ತಿತ್ವದಲ್ಲಿರುವ ಉದ್ದೇಶಕ್ಕಾಗಿ ಸೂಕ್ತವಾಗಿ ವಿನಿಯೋಗಿಸಲ್ಪಡುತ್ತಿದೆ ಎಂಬುದನ್ನು ಖಚಿತಪಡಿಸಿಕೊಳ್ಳುವುದಕ್ಕೆ ಅವಶ್ಯವಾಗಬಹುದಾದ ಯಾವುದೇ ಆದೇಶವನ್ನು ಹೊರಡಿಸುವುದಕ್ಕೆ ಅಥವಾ ನಿರ್ದೇಶನಗಳನ್ನು ನೀಡುವುದಕ್ಕೆ ಅಧಿಕಾರವನ್ನು ಒಳಗೊಂಡಿರತಕ್ಕದ್ದು."

**9. 21ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 21ನೇ ಪ್ರಕರಣದಲ್ಲಿ,–

(1) (1)ನೇ ಉಪಪ್ರಕರಣದ (ಸಿ) ಖಂಡದಲ್ಲಿ,–

(i) "ಮೂರು ವರ್ಷಗಳ" ಎಂಬ ಪದಗಳಿಗೆ "ನಾಲ್ಕು ವರ್ಷಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (vii) ನೇ ಉಪಖಂಡದಲ್ಲಿ "ಇಬ್ಬರು ಇತರರು" ಎಂಬ ಪದಗಳಿಗೆ "ಮೂವರು ಇತರರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(2) (7)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(7) ಅಧ್ಯಕ್ಷನ ಗೈರು ಹಾಜರಿಯಲ್ಲಿ, ನ್ಯಾಯಿಕ ಸದಸ್ಯನು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು."

**10. 21ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 21ಎ ಪ್ರಕರಣದಲ್ಲಿ,–

(1) (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ರಾಜ್ಯ ಧಾರ್ಮಿಕ ಪರಿಷತ್ತಿನ ಅಧಿಕಾರಗಳಿಗೆ ಒಳಪಟ್ಟು, ಜಿಲ್ಲಾ ಧಾರ್ಮಿಕ ಪರಿಷತ್ತು, ಜಿಲ್ಲೆಯೊಳಗಿನ ಯಾವ ಧಾರ್ಮಿಕ ಸಂಸ್ಥೆಗಳ ವಾರ್ಷಿಕ ಆದಾಯವು ಇಪ್ಪತ್ತೈದು ಲಕ್ಷ ರೂಪಾಯಿಗಳನ್ನು ಮೀರಿಲ್ಲವೋ ಆ ಧಾರ್ಮಿಕ ಸಂಸ್ಥೆಗಳ ಮೇಲ್ವಿಚಾರಣೆ ಮತ್ತು ನಿಯಂತ್ರಣದ ಸಾಮಾನ್ಯ ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಅಂಥ ಮೇಲ್ವಿಚಾರಣೆ ಹಾಗೂ ನಿಯಂತ್ರಣವು ಅಂಥ ಸಂಸ್ಥೆಗಳು ಮತ್ತು ದತ್ತಿಗಳು ಉಚಿತ ರೀತಿಯಲ್ಲಿ ಆಡಳಿತ ನಡೆಸಲ್ಪಡುತ್ತಿವೆ ಹಾಗೂ ಅವುಗಳ ಆದಾಯವು, ಅವುಗಳು ಸ್ಥಾಪನೆಯಾಗಿರುವ ಅಥವಾ ಅಸ್ತಿತ್ವದಲ್ಲಿರುವ ಉದ್ದೇಶಕ್ಕಾಗಿ ಸೂಕ್ತವಾಗಿ ವಿನಿಯೋಗಿಸಲ್ಪಡುತ್ತಿದೆ ಎಂಬುದನ್ನು ಖಚಿತಪಡಿಸಿಕೊಳ್ಳುವುದಕ್ಕೆ ಅವಶ್ಯವಾಗಬಹುದಾದ ಯಾವುದೇ ಆದೇಶವನ್ನು ಹೊರಡಿಸುವುದಕ್ಕೆ ಅಥವಾ ನಿರ್ದೇಶನಗಳನ್ನು ನೀಡುವುದಕ್ಕೆ ಅಧಿಕಾರವನ್ನು ಒಳಗೊಂಡಿರತಕ್ಕದ್ದು."

(2) (2)ನೇ ಉಪಪ್ರಕರಣದಲ್ಲಿ,–

(ಎ) (ಎ)ಖಂಡದಲ್ಲಿ "ಹತ್ತು ಲಕ್ಷ ರೂಪಾಯಿಗಳಿಗಿಂತ" ಎಂಬ ಪದಗಳಿಗೆ "ಇಪ್ಪತ್ತೈದು ಲಕ್ಷ ರೂಪಾಯಿಗಳಿಗಿಂತ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) (ಬಿ)ಖಂಡದಲ್ಲಿ "ಹತ್ತು ಲಕ್ಷ ರೂಪಾಯಿಗಳಿಗಿಂತ" ಎಂಬ ಪದಗಳಿಗೆ "ಇಪ್ಪತ್ತೈದು ಲಕ್ಷ ರೂಪಾಯಿಗಳಿಗಿಂತ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**11. 22ನೇ ಪ್ರಕರಣವನ್ನು ಬಿಟ್ಟುಬಿಡುವುದು.–** ಮೂಲ ಅಧಿನಿಯಮದ 22ನೇ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**12. 25ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 25ನೇ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು ಮತ್ತು ಹಾಗೆ ಬಿಟ್ಟುಬಿಡಲಾದ 25ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**25. ವ್ಯವಸ್ಥಾಪನಾ ಸಮಿತಿಯ ರಚನೆ.–** (1) ಒಂದು ಅಥವಾ ಹೆಚ್ಚು ಅಧಿಸೂಚಿತ ಸಂಸ್ಥೆಗಳಿಗೆ ಸಂಬಂಧಿಸಿದಂತೆ, ಅಧಿಸೂಚಿತ ಸಂಸ್ಥೆಗಳ ಒಟ್ಟು ವಾರ್ಷಿಕ ಆದಾಯವು ಇಪ್ಪತ್ತೈದು ಲಕ್ಷ ರೂಪಾಯಿಗಳನ್ನು ಮೀರಿದ್ದಲ್ಲಿ ರಾಜ್ಯ ಧಾರ್ಮಿಕ ಪರಿಷತ್ತು, ಮತ್ತು ವಾರ್ಷಿಕ ಆದಾಯವು ಇಪ್ಪತ್ತೈದು ಲಕ್ಷ ರೂಪಾಯಿಗಳನ್ನು ಮೀರದಿದ್ದಲ್ಲಿ ಜಿಲ್ಲಾ ಧಾರ್ಮಿಕ ಪರಿಷತ್ತು, ಭಕ್ತರ ಮತ್ತು ಹಿಂದೂ ಧಾರ್ಮಿಕ ಸಂಸ್ಥೆಗಳ ಅನುಯಾಯಿಗಳ ಹಾಗೂ ಧರ್ಮಾದಾಯ ಸಂಸ್ಥೆಗಳ ಫಲಾನುಭವಿಗಳ ಪೈಕಿಯಿಂದ ಒಂಬತ್ತು ಜನ ಸದಸ್ಯರನ್ನು ಮೀರದ ಒಂದು ವ್ಯವಸ್ಥಾಪನಾ ಸಮಿತಿಯನ್ನು ರಚಿಸತಕ್ಕದ್ದು ಮತ್ತು ಇದು ಈ ಮುಂದಿನವರನ್ನು ಎಂದರೆ:–

(i) ಒಂದು ದೇವಾಲಯದ ಸಂಬಂಧದಲ್ಲಿ ಪ್ರಧಾನ ಅರ್ಚಕ ಅಥವಾ ಅರ್ಚಕ;

(ii) ಅನುಸೂಚಿತ ಜಾತಿ ಅಥವಾ ಅನುಸೂಚಿತ ಬುಡಕಟ್ಟಿಗೆ ಸೇರಿದವರ ಪೈಕಿಯಿಂದ ಕೊನೇ ಪಕ್ಷ ಒಬ್ಬರು;

(iii) ಇಬ್ಬರು ಮಹಿಳೆಯರು;

(iv) ಸಂಸ್ಥೆಯು ಇರುವ ಸ್ಥಳದಲ್ಲಿ ವಾಸಿಸುತ್ತಿರುವ ವ್ಯಕ್ತಿಗಳ ಪೈಕಿಯಿಂದ ಕೊನೇ ಪಕ್ಷ ಒಬ್ಬರು,

– ಸದಸ್ಯರುಗಳನ್ನು ಹೊಂದಿರತಕ್ಕದ್ದು:

ಪರಂತು, ಸಂಯೋಜಿತ ಸಂಸ್ಥೆಯ ಸಂದರ್ಭದಲ್ಲಿ ಹಿಂದೂ ಮತ್ತು ಇತರೆ ಧರ್ಮಗಳೆರಡರಿಂದಲೂ ಸದಸ್ಯರನ್ನು ನೇಮಕ ಮಾಡಿಕೊಳ್ಳಬಹುದು:

ಮತ್ತು ಪರಂತು, ಅಧಿಸೂಚಿತ ಸಂಸ್ಥೆಯ ಸಂಬಂಧದಲ್ಲಿ ವ್ಯವಸ್ಥಾಪನಾ ಸಮಿತಿಯನ್ನು ಅಲ್ಲಿ ಅನುಸರಿಸುತ್ತಿರುವ ರೂಢಿ ಹಾಗೂ ಆಚರಣೆಗಳಿಗನುಸಾರವಾಗಿ ರಚಿಸತಕ್ಕದ್ದು:

ಅಲ್ಲದೆ ಪರಂತು, ಕಾನೂನುಬದ್ಧವಾಗಿ ಪದವನ್ನು ಹೊಂದಿರುವಂಥ ನಿರಸಿತ ಅಧಿನಿಯಮಗಳ ಅಡಿಯಲ್ಲಿ ರಚಿತವಾದ ಅಥವಾ ನೇಮಕವಾದ ಪ್ರತಿಯೊಂದು ವ್ಯವಸ್ಥಾಪನಾ ಸಮಿತಿ ಅಥವಾ ಪಂಚ ಸಮಿತಿ ಅಥವಾ ಧರ್ಮದರ್ಶಿ ಸಮಿತಿ ಅಥವಾ ವಂಶಪಾರಂಪರ್ಯವಲ್ಲದ ನ್ಯಾಸಧಾರಿಗಳು, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ಎರಡನೇ ತಿದ್ದುಪಡಿ) ಅಧಿನಿಯಮ, 2011 ಪ್ರಾರಂಭವಾದ ದಿನಾಂಕದಿಂದ ಅಂಥ ಪದವನ್ನು ಹೊಂದಿರುವುದು ನಿಂತುಹೋಗತಕ್ಕದ್ದು.

(2) (ಎ) ರಾಜ್ಯ ಧಾರ್ಮಿಕ ಪರಿಷತ್ತು, (1)ನೇ ಉಪಪ್ರಕರಣದ ಅಡಿಯಲ್ಲಿ ವ್ಯವಸ್ಥಾಪನಾ ಸಮಿತಿಯನ್ನು ರಚಿಸುವಾಗ ಸಂಸ್ಥೆ ಅಥವಾ ಅದರ ಯಾವುದೇ ಶಾಖೆಯು ಯಾವ ಧಾರ್ಮಿಕ ಸಂಪ್ರದಾಯಕ್ಕೆ ಸೇರುತ್ತದೆಯೋ ಆ ಧಾರ್ಮಿಕ ಸಂಪ್ರದಾಯಕ್ಕೆ ಸೂಕ್ತ ಮನ್ನಣೆ ನೀಡತಕ್ಕದ್ದು.

(ಬಿ) ವ್ಯವಸ್ಥಾಪನಾ ಸಮಿತಿಯ ರಚನೆಯ ವಿಧಾನ, ಸದಸ್ಯರ ಪೂರ್ವವೃತ್ತಾಂತ ಹಾಗೂ ಇತರ ವಿಷಯ ಯಾವುದಾದರೂ ಇದ್ದಲ್ಲಿ, ಅವುಗಳ ಸತ್ಯಾಪನೆಯನ್ನು, ನಿಯಮಿಸಬಹುದಾದ ಅಂಥ ರೀತಿಯಲ್ಲಿ ಮಾಡತಕ್ಕದ್ದು.

(ಸಿ) ಯಾವೊಬ್ಬ ವ್ಯಕ್ತಿಯು ಒಂದೇ ಸಮಯದಲ್ಲಿ ಒಂದಕ್ಕಿಂತ ಹೆಚ್ಚು ವ್ಯವಸ್ಥಾಪನಾ ಸಮಿತಿಗಳಿಗೆ ಸದಸ್ಯನಾಗುವುದಕ್ಕೆ ಅರ್ಹನಾಗಿರತಕ್ಕದ್ದಲ್ಲ.

(ಡಿ) ಯಾವುದೇ ಹಂತದಲ್ಲಿ ಯಾವುದೇ ರಾಜಕೀಯ ಪಕ್ಷದ ಪದಾಧಿಕಾರಿಯಾಗಿರುವ ಯಾವೊಬ್ಬ ವ್ಯಕ್ತಿಯು ವ್ಯವಸ್ಥಾಪನಾ ಸಮಿತಿಯ ಸದಸ್ಯನಾಗಿರತಕ್ಕದ್ದಲ್ಲ.

(3) ಯಾವೊಬ್ಬ ವ್ಯಕ್ತಿಯು,-

(i) ದೇವರಲ್ಲಿ ನಂಬಿಕೆಯುಳ್ಳವನಾಗಿದ್ದ ಹೊರತು;

(ii) ಅವನು ಇಪ್ಪತ್ತೈದು ವರ್ಷ ವಯಸ್ಸಿನವನಾಗಿದ್ದ ಹೊರತು;

(iii)ಒಳ್ಳೆಯ ವರ್ತನೆ ಹಾಗೂ ಹೆಸರು ಹೊಂದಿದ್ದ ಹೊರತು ಹಾಗೂ ಸಂಸ್ಥೆಯು ಇರುವ ಪ್ರದೇಶದಲ್ಲಿ ಗೌರವಕ್ಕೆ ಪಾತ್ರನಾಗಿದ್ದ ಹೊರತು;

- ಒಂದು ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಮಂಡಲಿಯ ಸದಸ್ಯನಾಗಿ ನೇಮಕಗೊಳ್ಳಲು ಅರ್ಹನಾಗತಕ್ಕದ್ದಲ್ಲ.

(4) ಯಾವೊಬ್ಬ ವ್ಯಕ್ತಿಯು,-

(i) ಒಂದು ಸಕ್ಷಮ ನ್ಯಾಯಾಲಯದಿಂದ ಅವಿಮುಕ್ತ ದಿವಾಳಿಯೆಂದು ಘೋಷಿತನಾಗಿದ್ದರೆ, ಅಥವಾ

(ii) ಅಸ್ವಸ್ಥ ಚಿತ್ತನಾಗಿದ್ದು ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲಾಗಿದ್ದರೆ ಅಥವಾ ಕಿವುಡ ಅಥವಾ ಮೂಕನಾಗಿದ್ದರೆ ಅಥವಾ ಕುಷ್ಠ ಅಥವಾ ಇತರ ಯಾವುದೇ ಭಯಂಕರ ಅಥವಾ ಸಾಂಕ್ರಾಮಿಕ ಖಾಯಿಲೆಯಿಂದ ಪೀಡಿತನಾಗಿದ್ದರೆ, ಅಥವಾ

(iii) ಸಂಸ್ಥೆಯ ಯಾವುದೇ ಸ್ವತ್ತಿನ ಅಥವಾ ಮಾಡಿಕೊಳ್ಳಲಾದ ಯಾವುದೇ ಕರಾರಿನ ಸಂಬಂಧದಲ್ಲಿ ಈಗಿರುವ ಗುತ್ತಿಗೆಯಲ್ಲಿ ಸಂಸ್ಥೆಗಾಗಿ ಮಾಡಲಾದ ಕಾಮಗಾರಿಯಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷ ಹಿತಾಸಕ್ತಿ ಹೊಂದಿದ್ದರೆ ಅಥವಾ ಸಂಸ್ಥೆಗೆ ತಾನು ಕೊಡಬೇಕಾದ ಯಾವುದೇ ಪ್ರಕಾರದ ಬಾಕಿಯನ್ನು ಕೊಡದೇ ಉಳಿಸಿಕೊಂಡಿದ್ದರೆ; ಅಥವಾ

(iv) ಸಂಸ್ಥೆಯ ಪರವಾಗಿ ಅಥವಾ ವಿರುದ್ಧವಾಗಿ ಕಾನೂನು ವೃತ್ತಿಗಾರನಾಗಿ ಹಾಜರಾಗುತ್ತಿದ್ದರೆ; ಅಥವಾ

(v) ನೈತಿಕ ಅಧಃಪತನವನ್ನು ಒಳಗೊಳ್ಳುವ ಒಂದು ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಶಿಕ್ಷಿತನಾಗಿದ್ದು ಮತ್ತು ಅಂಥ ಶಿಕ್ಷೆಯನ್ನು ಹಿಂತೆಗೆದುಕೊಂಡಿದ್ದರೆ; ಅಥವಾ ಅಪರಾಧವನ್ನು ಕ್ಷಮಿಸಿರದಿದ್ದರೆ, ಅಥವಾ

(vi) ಯಾವಾಗಲಾದರೂ ಸಂಸ್ಥೆಯ ಹಿತಾಸಕ್ತಿಗೆ ವಿರುದ್ಧವಾಗಿ ವರ್ತಿಸಿದ್ದರೆ; ಅಥವಾ

(vii) ಅಂಥ ಸಂಸ್ಥೆಯ ಅರ್ಚಕನಾಗಿ ಅಲ್ಲದೆ ಯಾವುದೇ ಪದವನ್ನು ಧಾರಣ ಮಾಡಿದ್ದರೆ ಅಥವಾ ಒಬ್ಬ ನೌಕರನಾಗಿದ್ದರೆ ಅಥವಾ ಅಂಥ ಸಂಸ್ಥೆಯಿಂದ ಯಾವುದೇ ಉಪಲಬ್ಧಿಗಳನ್ನು ಅಥವಾ ಆನುಷಂಗಿಕ ಲಾಭವನ್ನು ಸ್ವೀಕರಿಸುವ ವ್ಯಕ್ತಿಯಾಗಿದ್ದರೆ; ಅಥವಾ

(viii) ಮದ್ಯಪಾನ ಅಥವಾ ಮಾದಕದ್ರವ್ಯ ಸೇವನೆಯ ದುರ್ವ್ಯಸನಿಯಾಗಿದ್ದರೆ; ಅಥವಾ

(ix) ಹಿಂದೂ ಅಲ್ಲದಿದ್ದರೆ; ಅಥವಾ ಹಿಂದೂ ಆಗಿದ್ದು ತರುವಾಯದಲ್ಲಿ ಯಾವುದೇ ಇತರ ಧರ್ಮಕ್ಕೆ ಪರಿವರ್ತಿತನಾಗಿದ್ದರೆ.

- ಅವನು ಯಾವುದೇ ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಸಮಿತಿಯ ಸದಸ್ಯನಾಗಿ ನೇಮಕಗೊಳ್ಳಲು ಅಥವಾ ಮುಂದುವರಿಯಲು ಅನರ್ಹನಾಗಿರತಕ್ಕದ್ದು.

(5) ಸಮಿತಿಯ ಒಬ್ಬ ಸದಸ್ಯನು (4)ನೇ ಉಪಪ್ರಕರಣದ ಅಡಿಯಲ್ಲಿ ಯಾವುದೇ ಅನರ್ಹತೆಗೆ ಒಳಗಾದರೆ ಅಥವಾ ಅನರ್ಹನಾದರೆ ಅವನು ಅಂಥ ಸದಸ್ಯನಾಗಿರುವುದು ಸಹಜವಾಗಿಯೇ ನಿಂತು ಹೋಗತಕ್ಕದ್ದು.

(6) ಯಾವೊಬ್ಬ ಸದಸ್ಯನು (4)ನೇ ಉಪಪ್ರಕರಣದ ಅಡಿಯಲ್ಲಿ ಯಾವುದೇ ಅನರ್ಹತೆಗೆ ಒಳಗಾದ ಬಗ್ಗೆ ಅಥವಾ ಅನರ್ಹನಾದ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಸಂಬಂಧಪಟ್ಟ ವ್ಯಕ್ತಿಗೆ ಅಹವಾಲು ಹೇಳಿಕೊಳ್ಳಲು ಅವಕಾಶಕೊಟ್ಟ ತರುವಾಯ ಧಾರ್ಮಿಕ ಪರಿಷತ್ತು ತಾನಾಗಿಯೇ ಆಗಲಿ ಅಥವಾ ತನಗೆ ಬಂದ ವರದಿಯ ಮೇಲಾಗಲಿ ಆ ಪ್ರಶ್ನೆಯನ್ನು ತೀರ್ಮಾನಿಸಬಹುದು."

**13. 26ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 26ನೇ ಪ್ರಕರಣದಲ್ಲಿ, (3)ನೇ ಉಪ ಪ್ರಕರಣದಲ್ಲಿ, "ರಾಜ್ಯ ಸರ್ಕಾರವು" ಎಂಬ ಪದಗಳ ತರುವಾಯ "ಅಥವಾ ನಿಯಮಿಸಲಾದ ಪ್ರಾಧಿಕಾರವು" ಎಂಬ ಪದಗಳನ್ನು ಸೇರಿಸತಕ್ಕದ್ದು.

**14. 28ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 28ನೇ ಪ್ರಕರಣದಲ್ಲಿ (5)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**15. 29ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ನೇ ಪ್ರಕರಣದಲ್ಲಿ, "26ನೇ ಪ್ರಕರಣದ ಅಡಿಯಲ್ಲಿ ಸಮಿತಿಯ ಪದಾವಧಿ ಮುಕ್ತಾಯವಾದ ತರುವಾಯ" ಎಂಬ ಪದಗಳ ತರುವಾಯ "ಅಥವಾ ಯಾವುವೇ ಇತರ ಕಾರಣಗಳಿಗಾಗಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

**16. 35ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 35ನೇ ಪ್ರಕರಣದಲ್ಲಿ (1)ನೇ ಉಪಪ್ರಕರಣದಲ್ಲಿ "41ನೇ ಪ್ರಕರಣವನ್ನು ಮತ್ತು" ಎಂಬ ಅಂಕಿ ಮತ್ತು ಪದಗಳನ್ನು ಬಿಟ್ಟುಬಿಡತಕ್ಕದ್ದು.

**17. 52ನೇ ಪ್ರಕರಣವನ್ನು ಬಿಟ್ಟುಬಿಡುವುದು.–**ಮೂಲ ಅಧಿನಿಯಮದ 52ನೇ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**18. 63ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ನೇ ಪ್ರಕರಣದಲ್ಲಿ, ಶೀರ್ಷಿಕೆಯಲ್ಲಿ, (1)ನೇ ಉಪಪ್ರಕರಣದಲ್ಲಿ ಮತ್ತು (1)ನೇ ಉಪಪ್ರಕರಣದ ಪರಂತುಕದಲ್ಲಿ ಮತ್ತು (2)ನೇ ಉಪಪ್ರಕರಣದಲ್ಲಿ "ಪ್ರಾದೇಶಿಕ ಕಮೀಷನರ್" ಎಂಬ ಪದಗಳಿಗೆ "ಕಮೀಷನರ್" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**19. 76ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 76ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ (ಡಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಡಿ) 20ನೇ ಮತ್ತು 21ನೇ ಪ್ರಕರಣದ ಅಡಿಯಲ್ಲಿ ಅನುಕ್ರಮವಾಗಿ ಸ್ಥಾಪಿತವಾದ ರಾಜ್ಯ ಧಾರ್ಮಿಕ ಪರಿಷತ್ತು ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ವ್ಯವಹಾರಗಳ ನಿರ್ವಹಣೆ;"

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಈ ಅಧಿನಿಯಮದ ಉಪಬಂಧಗಳನ್ನು ಅನುಷ್ಠಾನಗೊಳಿಸುವಾಗ ಎದುರಿಸಿದ ಕೆಲವು ತೊಂದರೆಗಳನ್ನು ನಿವಾರಿಸಲು ಮತ್ತು,–

(1) 23ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿತವಾದ ಎಲ್ಲಾ ಧಾರ್ಮಿಕ ಸಂಸ್ಥೆಗಳು ಅಥವಾ ಧರ್ಮಾದಾಯ ದತ್ತಿಗಳಿಗೆ ಈ ಅಧಿನಿಯಮದ ಉಪಬಂಧಗಳು ಅನ್ವಯವಾಗತಕ್ಕದ್ದು ಎಂದು ನಿರ್ದಿಷ್ಟಪಡಿಸಲು;

(2) 23ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿತವಾದ ಧಾರ್ಮಿಕ ಸಂಸ್ಥೆಗಳು ಅಥವಾ ಧರ್ಮಾದಾಯ ದತ್ತಿಗಳನ್ನು ಹೊರತುಪಡಿಸಿ ಎಲ್ಲಾ ಧಾರ್ಮಿಕ ಸಂಸ್ಥೆಗಳು ಅಥವಾ ಧರ್ಮಾದಾಯ ದತ್ತಿಗಳಿಗೆ 53ನೇ ಪ್ರಕರಣ ಮತ್ತು VIIIನೇ ಅಧ್ಯಾಯವು ಅನ್ವಯವಾಗುವುದಕ್ಕೆ ಉಪಬಂಧ ಕಲ್ಪಿಸಲು;

(3) ಅಧಿನಿಯಮದ ಕೆಲವು ಪರಸ್ಪರ ವ್ಯಾಪ್ತವಾಗಿರುವ ಉಪಬಂಧಗಳನ್ನು ಬಿಟ್ಟುಬಿಡಲು;

(4) ಅಧಿನಿಯಮದ ಉದ್ದೇಶವನ್ನು ಈಡೇರಿಸುವುದಕ್ಕಾಗಿ ಸಾಮಾನ್ಯ ಸಂಗ್ರಹಣ ನಿಧಿಯ ಅಡಿಯಲ್ಲಿ ಸಂಗ್ರಹವಾದ ಮೊಬಲಗನ್ನು ವೆಚ್ಚ ಮಾಡುವುದನ್ನು ಸಮರ್ಥಗೊಳಿಸಲು ಮತ್ತು ಗೋಶಾಲೆಯ ಸ್ಥಾಪನೆ ಮತ್ತು ಅಭಿವೃದ್ಧಿಗಾಗಿ ನೆರವನ್ನು ಮಂಜೂರು ಮಾಡಲು;

(5) ರಾಜ್ಯ ಧಾರ್ಮಿಕ ಪರಿಷತ್ತು ಮತ್ತು ಜಿಲ್ಲಾ ಧಾರ್ಮಿಕ ಪರಿಷತ್ತಿನ ನಾಮನಿರ್ದೇಶಿತ ಸದಸ್ಯರ ಪದಾವಧಿಯನ್ನು ಮೂರು ವರ್ಷಗಳಿಂದ ನಾಲ್ಕು ವರ್ಷಗಳಿಗೆ ಹೆಚ್ಚಿಸಲು;

(6) ಇತರ ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಮಾಡಲು,

– ಉಪಬಂಧ ಕಲ್ಪಿಸಲು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ ಪತ್ರ**

**ಖಂಡ 12:** ವಿಧೇಯಕದ 12ನೇ ಖಂಡದ ಮೂಲಕ ಸೇರಿಸಲು ಉದ್ದೇಶಿಸಲಾದ 25ನೇ ಪ್ರಕರಣವು, ವ್ಯವಸ್ಥಾಪನಾ ಸಮಿತಿಯ ರಚನೆಯ ಕಾರ್ಯವಿಧಾನ, ಯಾವೊಬ್ಬ ಸದಸ್ಯರ ಪೂರ್ವವೃತ್ತಾಂತ ಮತ್ತು ಇತರ ವಿಷಯವು ಯಾವುದಾದರೂ ಇದ್ದಲ್ಲಿ, ಅವುಗಳ ಸತ್ಯಾಪನೆಯ ಸಂಬಂಧದಲ್ಲಿ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ಸಾಮಾನ್ಯ ಸ್ವರೂಪದ್ದಾಗಿದೆ.

**ಡಾ. ವಿ. ಎಸ್. ಆಚಾರ್ಯ**

ಉನ್ನತ ಶಿಕ್ಷಣ, ಯೋಜನೆ, ಸಾಂಖ್ಯಿಕ,

ಮುಜರಾಯಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವರು

**ವಿ. ಶ್ರೀಶ್**

ಕಾರ್ಯದರ್ಶಿ

ಕರ್ನಾಟಕ ವಿಧಾನ ಪರಿಷತ್ತು

**ಅನುಬಂಧ**

**ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ, 1997ರ (2001ರ ಕರ್ನಾಟಕ ಅಧಿನಿಯಮ ಸಂಖ್ಯೆ 33) ಉದ್ಧೃತ ಭಾಗ**

xx xx xx

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಪ್ರಾರಂಭ ಮತ್ತು ಅನ್ವಯ.**- (1) xx xx xx

(4) ಇದು ಒಂದು ಮಠಕ್ಕೆ ಅಥವಾ ಮಠಕ್ಕೆ ಸೇರಿದ ಅಥವಾ ಅದು ನಿರ್ವಹಿಸುತ್ತಿರುವ ದೇವಸ್ಥಾನಕ್ಕೆ ಅನ್ವಯವಾಗತಕ್ಕದ್ದಲ್ಲ.

xx xx xx

2. **ಪರಿಭಾಷೆಗಳು.**- ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯ ಪಡಿಸಿದ ಹೊರತು,-

(1) xx xx xx

2) "ಅರ್ಚಕ" ಎಂಬುದರಲ್ಲಿ ಪೂಜಾರಿ ಅಥವಾ ಅರ್ಚನೆ, ಪೂಜೆ ಅಥವಾ ಇತರ ಧಾರ್ಮಿಕ ವಿಧಿಗಳನ್ನು ನೆರವೇರಿಸುವ ಅಥವಾ ನಡೆಸುವ ಇತರ ವ್ಯಕ್ತಿಯು ಸೇರುತ್ತಾನೆ;

3) xx xx xx

15) "ವಂಶಪಾರಂಪರ್ಯ ಪದಧಾರಕ" ಮತ್ತು "ವಂಶಪಾರಂಪರ್ಯ ನ್ಯಾಸಧಾರಿ""ಎಂದರೆ, ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆ ಅಥವಾ ಧರ್ಮಾದಾಯ ದತ್ತಿಯ ಸಂಸ್ಥಾಪಕನು ವಿಧಿಸಿದ ಉತ್ತರಾಧಿಕಾರ ನಿಯಮಕ್ಕನುಸಾರವಾಗಿ ಅಥವಾ ಸಂಸ್ಥೆ ಅಥವಾ ದತ್ತಿಗೆ ಅನ್ವಯಿಸುವ ಆಚರಣೆ ಅಥವಾ ಪದ್ಧತಿಗನುಸಾರವಾಗಿ ಅಥವಾ ಸಂದರ್ಭಾನುಸಾರ ತತ್ಕಾಲದಲ್ಲಿ ಜಾರಿಯಲ್ಲಿರುವ ಉತ್ತರಾಧಿಕಾರದ ಕಾನೂನಿಗೆ ಅನುಸಾರವಾಗಿ ಅಥವಾ ಯಾವುದೇ ಅಧಿನಿಯಮದ ಅಡಿಯಲ್ಲಿ ಅಥವಾ ಯಾವುದೇ ಅಧಿನಿಯಮದ ಅಡಿಯಲ್ಲಿ ಹಾಗೆ ದಾಖಲಾಗಿದೆ ಎಂದು ಯಾವುದೇ ನ್ಯಾಯಾಲಯ ಅಥವಾ ಶಾಸನಾತ್ಮಕ ಪ್ರಾದಿಕಾರದಿಂದ ಘೋಷಿಸಲಾದಂತೆ. ಯಾರಿಗೆ ಆ ಪದದ ಉತ್ತರಾಧಿಕಾರಿ ಪ್ರಾಪ್ತವಾಗುವುದೋ ಆ ಪದಧಾರಕ ಮತ್ತು ನ್ಯಾಸಧಾರಿ;

xx xx xx

3. **ಆಯುಕ್ತ.**– (1) xx xx xx

3) (1)ನೇ ಉಪ-ಪ್ರಕರಣದ ಅಡಿಯಲ್ಲಿ ನೇಮಕಗೊಂಡ ಒಬ್ಬ ಆಯುಕ್ತನು, ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅದರ ಅಡಿಯಲ್ಲಿ ಪ್ರದತ್ತವಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು ಹೊರಡಿಸಬಹುದಾದಂಥ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೊಳಪಟ್ಟು ರಾಜ್ಯದಲ್ಲಿ ಎಲ್ಲ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳಿಗೆ ಸಂಬಂಧಿಸಿದಂತೆ, ಈ ಅಧಿನಿಯಮದ ಉಪಬಂಧಗಳನ್ನು ನೆರವೇರಿಸುವ ಉದ್ದೇಶಕ್ಕಾಗಿ ಸಾಮಾನ್ಯ ಅಧೀಕ್ಷಣೆ ಮತ್ತು ನಿಯಂತ್ರಣದ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಅಧೀಕ್ಷಣೆ ಮತ್ತು ನಿಯಂತ್ರಣವು, ಆ ಸಂಸ್ಥೆಗಳನ್ನು ಯಾವ ಉದ್ದೇಶಕ್ಕಾಗಿ ಸ್ಥಾಪಿಸಲಾಯಿತೋ ಅಥವಾ ಅವು ಯಾವ ಉದ್ದೇಶಕ್ಕಾಗಿ ಅಸ್ತಿತ್ವದಲ್ಲಿವೆಯೋ ಆ ಉದ್ದೇಶಕ್ಕಾಗಿ ಅಂಥ ಸಂಸ್ಥೆಗಳ ಆಡಳಿತವನ್ನು ಯುಕ್ತವಾಗಿ ನಿರ್ವಹಿಸಲಾಗುತ್ತಿದೆ ಮತ್ತು ಅವುಗಳ ಆದಾಯವನ್ನು ಸಮುಚಿತವಾಗಿ ಬಳಸಲಾಗುತ್ತಿದೆ ಎಂಬುದನ್ನು ಖಚಿತಪಡಿಸಿಕೊಳ್ಳಲು ಅವಶ್ಯಕವೆಂದು ಭಾವಿಸುವಂಥ ಯಾವುದೇ ಆದೇಶವನ್ನು ಹೊರಡಿಸುವ ಅಧಿಕಾರವನ್ನು ಒಳಗೊಳ್ಳತಕ್ಕದ್ದು.

xx xx xx

**19. ಸಾಮಾನ್ಯ ಸಂಗ್ರಹಣ ನಿಧಿಯ ನಿರ್ವಹಣೆ.**– (1) ರಾಜ್ಯ ಧಾರ್ಮಿಕ ಪರಿಷತ್ತು, ಸಾಮಾನ್ಯ ಸಂಗ್ರಹಣ ನಿಧಿಯನ್ನು ಇಲ್ಲಿ ಹೇಳಿರುವ ಷರತ್ತುಗಳಿಗೊಳಪಟ್ಟು, ಈ ಮುಂದಿನ ಉದ್ದೇಶಗಳಿಗಾಗಿ ನಿರ್ವಹಿಸತಕ್ಕದ್ದು ಎಂದರೆ.–

ಎ) ಬಡತನದಲ್ಲಿರುವ ಅಥವಾ ಅಗತ್ಯ ಸಂದರ್ಭದಲ್ಲಿರುವ ಇತರ ಯಾವುದೇ ಧಾರ್ಮಿಕ ಸಂಸ್ಥೆಗೆ ಸಹಾಯ ನೀಡಿಕೆ;

ಬಿ) ಹಿಂದೂ ಧರ್ಮಕ್ಕೆ ಸಂಬಂಧಿಸಿದ ಯಾವುವೇ ಧಾರ್ಮಿಕ ಉದ್ದೇಶಗಳಿಗೆ ಸಹಾಯ ನೀಡಿಕೆ;

ಸಿ) ಸಂಸ್ಥೆಯ ಧಾರ್ಮಿಕ ಸಿದ್ಧಾಂತಗಳ ಪ್ರಚಾರ;

ಡಿ) ವೇದ ಪಾಠಶಾಲೆಗಳು, ಆಗಮ ಪಾಠಶಾಲೆಗಳು ಮತ್ತು ಅರ್ಚಕರಿಗೆ ತರಬೇತಿ ನೀಡುವ ಸಲುವಾಗಿ ಹಾಗೂ ಆ ಉದ್ದೇಶಕ್ಕಾಗಿ ಪ್ರಾಚೀನ ಬರಹಗಳ ಮತ್ತು ಭಾರತೀಯ ಭಾಷೆಗಳ ಅಧ್ಯಯನ ಮಾಡುವ ಸಲುವಾಗಿ ಶಾಲೆಗಳ ಸ್ಥಾಪನೆ ಹಾಗೂ ನಿರ್ವಹಣೆ;

ಇ) ಹಿಂದೂ ಧರ್ಮ, ತತ್ವಶಾಸ್ತ್ರ ಅಥವಾ ಶಾಸ್ತ್ರಗಳ ಅಧ್ಯಯನ ಅಥವಾ ಹಿಂದೂ ದೇವಸ್ಥಾನ ವಾಸ್ತುಶಿಲ್ಪದಲ್ಲಿ ಶಿಕ್ಷಣ ನೀಡುವ ಉದ್ದೇಶ ಹೊಂದಿರುವ ವಿಶ್ವವಿದ್ಯಾನಿಲಯ, ಕಾಲೇಜು ಅಥವಾ ಇತರ ಸಂಸ್ಥೆಯ ಸ್ಥಾಪನೆ ಮತ್ತು ನಿರ್ವಹಣೆ;

ಎಫ್) ಹಿಂದೂ ಧರ್ಮದ ವಿಷಯದಲ್ಲಿ ಶಿಕ್ಷಣವನ್ನು ನೀಡಲಾಗುವ ಶಿಕ್ಷಣ ಸಂಸ್ಥೆಗಳ ಸ್ಥಾಪನೆ ಮತ್ತು ನಿರ್ವಹಣೆ;

ಜಿ) ದೇವಸ್ಥಾನ ಕಲೆಗಳು ಮತ್ತು ವಾಸ್ತುಶಿಲ್ಪಕ್ಕೆ ಉತ್ತೇಜನ.

ಹೆಚ್) ಅನಾಥ ಹಿಂದೂ ಮಕ್ಕಳಿಗಾಗಿ ಅನಾಥಾಲಯಗಳ ಸ್ಥಾಪನೆ ಮತ್ತು ನಿರ್ವಹಣೆ;

ಐ) ಸಂಸ್ಥೆಯ ಜಮೆಯಲ್ಲಿ ಸಾಕಷ್ಟು ಹಣ ಇಲ್ಲದಿರುವಾಗ ಅರ್ಚಕರಿಗೆ ಮತ್ತು ದೇವಸ್ಥಾನದ ನೌಕರರಿಗೆ ಸೇವಾಂತ ಪ್ರಯೋಜನೆಗಳ ಸಂದಾಯ;

ಜೆ) ನಿರ್ಗತಿಕ, ಅಸಹಾಯಕ ಹಾಗೂ ದೈಹಿಕವಾಗಿ ಅಸಮರ್ಥರಾದ ಜನರಿಗಾಗಿ ಆಶ್ರಯ ಧಾಮಗಳ ಸ್ಥಾಪನೆ ಹಾಗೂ ನಿರ್ವಹಣೆ;

ಕೆ) ಯಾತ್ರಿಕರ ಅನುಕೂಲಕ್ಕಾಗಿ ಆಸ್ಪತ್ರೆಗಳು ಹಾಗೂ ಔಷಧಾಲಯಗಳ ಸ್ಥಾಪನೆ ಹಾಗೂ ನಿರ್ವಹಣೆ;

ಎಲ್) ಯಾವುದೇ ಇತರ ಹಿಂದೂ ಧಾರ್ಮಿಕ ಅಥವಾ ಧರ್ಮಾದಾಯ ಉದ್ದೇಶ;

xx xx xx

**20. ರಾಜ್ಯ ಧಾರ್ಮಿಕ ಪರಿಷತ್.**– (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ, ಅಧಿಸೂಚನೆ ಮೂಲಕ, ಈ ಮುಂದಿನ ಸದಸ್ಯರನ್ನು ಒಳಗೊಂಡ ಕರ್ನಾಟಕ ರಾಜ್ಯ ಧಾರ್ಮಿಕ ಪರಿಷತ್ತನ್ನು ರಚಿಸಬಹುದು, ಎಂದರೆ:–

(ಎ) ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಪ್ರಭಾರದಲ್ಲಿರುವ ಸಚಿವರು – ಅಧ್ಯಕ್ಷರು

(ಬಿ) ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ – ಉಪಾಧ್ಯಕ್ಷರು

(ಸಿ) ಆಯುಕ್ತರು, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳು – ಪದನಿಮಿತ್ತ ಕಾರ್ಯದರ್ಶಿ

(ಡಿ) ಮೂರು ವರ್ಷಗಳ ಅವಧಿಗಾಗಿ ಸರ್ಕಾರವು ನಾಮನಿರ್ದೇಶನ ಮಾಡಬೇಕಾದ ಸದಸ್ಯರು

(i) ಒಬ್ಬ ನಿವೃತ್ತ ಜಿಲ್ಲಾ ನ್ಯಾಯಾಧೀಶರು – ಸದಸ್ಯರು

(ii) ಒಬ್ಬ ಆಗಮ ವಿದ್ವಾಂಸರು – ಸದಸ್ಯರು

(iii) ಒಬ್ಬ ವೇದ ವಿದ್ವಾಂಸರು – ಸದಸ್ಯರು

(iv) ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಒಬ್ಬ ವ್ಯಕ್ತಿ – ಸದಸ್ಯರು

(v) ಹಿಂದುಳಿದ ವರ್ಗಗಳಿಗೆ ಸೇರಿದ ಒಬ್ಬ ವ್ಯಕ್ತಿ – ಸದಸ್ಯರು

(vi) ಒಬ್ಬ ಮಹಿಳೆ – ಸದಸ್ಯರು

(vii) ಇತರೆ ಇಬ್ಬರು – ಸದಸ್ಯರು

xx xx xx

**20ಎ. ರಾಜ್ಯ ಧಾರ್ಮಿಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** ರಾಜ್ಯ ಧಾರ್ಮಿಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(1) ರಾಜ್ಯ ಧಾರ್ಮಿಕ ಪರಿಷತ್ತು,–

(ಎ) ಧಾರ್ಮಿಕ ಪದ್ಧತಿಗಳು, ರೂಢಿಗಳು, ಆಚರಣೆ, ಸಂಪ್ರದಾಯಗಳ ಬಗೆಗಿನ ಯಾವುದೇ ವಿವಾದವನ್ನು ಬಗೆಹರಿಸಲು ಅಧಿಕಾರ ಹೊಂದಿರತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ, ಅದು, ಅಂಥ ವಿವಾದಗಳನ್ನು ಬಗೆಹರಿಸುವಲ್ಲಿ ನೆರವು ಪಡೆಯಲು ತಜ್ಞರೊಂದಿಗೆ ಸಮಾಲೋಚಿಸಬಹುದು;

(ಬಿ) ಒಂದು ದೇವಸ್ಥಾನವು ಸಾರ್ವಜನಿಕ ದೇವಸ್ಥಾನವೇ, ಖಾಸಗಿ ದೇವಸ್ಥಾನವೇ ಅಥವಾ ವರ್ಗದ ದೇವಸ್ಥಾನವೇ ಎಂಬ ಬಗ್ಗೆ;

(ಸಿ) ಒಂದು ಸಂಸ್ಥೆಯು ಧಾರ್ಮಿಕ ಸಂಸ್ಥೆಯೇ ಅಥವಾ ಸಂಯುಕ್ತ ಸಂಸ್ಥೆಯೇ ಎಂಬ ಬಗ್ಗೆ;

(ಡಿ) ಒಬ್ಬ ನ್ಯಾಸಧಾರಿಯು ಅಂಥ ಸಂಸ್ಥೆಯ ವಂಶಪಾರಂಪರ್ಯ ನ್ಯಾಸಧಾರಿಯಾಗಿ ಪದವನ್ನು ಹೊಂದಿರುವನೇ ಅಥವಾ ಹೊಂದಿದ್ದನೆ ಎಂಬ ಬಗ್ಗೆ,

– ತಲೆದೋರಿದ ಯಾವುದೇ ವಿವಾದವನ್ನು ಬಗೆಹರಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

(2) ರಾಜ್ಯ ಧಾರ್ಮಿಕ ಪರಿಷತ್ತು,–

(i) ಹತ್ತು ಲಕ್ಷ ರೂಪಾಯಿಗಳು ಮತ್ತು ಅದಕ್ಕೂ ಹೆಚ್ಚು ಒಟ್ಟು ವಾರ್ಷಿಕ ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗಳಿಗೆ ಒಂದು ವ್ಯವಸ್ಥಾಪನಾ ಸಮಿತಿಯನ್ನು ರಚಿಸಬಹುದು;

(ii) ಎರಡು ಲಕ್ಷ ರೂಪಾಯಿಗಳು ಮತ್ತು ಅದಕ್ಕೂ ಕಡಿಮೆ ಆದಾಯವನ್ನು ಹೊಂದಿರುವ ದೇವಸ್ಥಾನಗಳನ್ನು ದತ್ತು ತೆಗೆದುಕೊಳ್ಳುವುದಕ್ಕಾಗಿ ಯೋಜನೆಯನ್ನು ಅನುಮೋದಿಸಬಹುದು ಮತ್ತು ದತ್ತು ತೆಗೆದುಕೊಳ್ಳಲು ನಿಬಂಧನೆಗಳನ್ನು ನಿಗದಿಪಡಿಸಬಹುದು;

(iii) ಜಿಲ್ಲಾ ಧಾರ್ಮಿಕ ಪರಿಷತ್ತು ಹೊರಡಿಸಿದ ಆದೇಶಗಳ ಸಂಬಂಧದಲ್ಲಿ ಅಪೀಲು ಪ್ರಾಧಿಕಾರದಂತೆ ಕಾರ್ಯನಿರ್ವಹಿಸತಕ್ಕದ್ದು;

(iv) ಈ ಪ್ರಕರಣದಡಿಯಲ್ಲಿ ಉಪಬಂಧಿಸಲಾದಂತೆ ಯಾವುದೇ ವಿವಾದವನ್ನು ನಿರ್ಣಯಿಸುವ ಉದ್ದೇಶಕ್ಕಾಗಿ, ಪರಿಷತ್ತಿನ ನ್ಯಾಯಿಕ ಸದಸ್ಯರು ಹಾಗೂ ಆಯುಕ್ತರನ್ನು ಸದಸ್ಯರನ್ನಾಗಿ ಹೊಂದಿರುವ ಒಂದು ನ್ಯಾಯಾಧಿಕರಣವನ್ನು ರಚಿಸಬಹುದು. ಸದಸ್ಯರ ನಡುವೆ ಭಿನ್ನಾಭಿಪ್ರಾಯ ಬಂದಲ್ಲಿ, ಅದನ್ನು ರಾಜ್ಯ ಧಾರ್ಮಿಕ ಪರಿಷತ್ತು ತೀರ್ಮಾನಿಸತಕ್ಕದ್ದು.

(v) ಅಧಿನಿಯಮದ ಉಪಬಂಧಗಳಡಿಯಲ್ಲಿ ಅಧಿಸೂಚಿಸಬೇಕಾದ ಅಥವಾ ತೆಗೆದುಹಾಕಬೇಕಾದ ಸಂಸ್ಥೆಗಳನ್ನು ಅಧಿಸೂಚಿಸಲು ಅಥವಾ ಅಧಿಸೂಚನೆಯಿಂದ ತೆಗೆದುಹಾಕಲು ಸರ್ಕಾರಕ್ಕೆ ಶಿಫಾರಸ್ಸು ಮಾಡಬಹುದು.

(vi) 28ನೇ ಪ್ರಕರಣದಡಿಯಲ್ಲಿ ಉಪಬಂಧಿಸಲಾದಂತೆ ಹತ್ತು ಲಕ್ಷ ರೂಪಾಯಿಗಳು ಮತ್ತು ಅದಕ್ಕಿಂತ ಹೆಚ್ಚಿನ ಒಟ್ಟು ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗಳ ವ್ಯವಸ್ಥಾಪನಾ ಸಮಿತಿಯನ್ನು ರದ್ದುಪಡಿಸಬಹುದು ಮತ್ತು 29ನೇ ಪ್ರಕರಣದಡಿಯಲ್ಲಿ ಅಧಿಸೂಚಿತ ಸಂಸ್ಥೆಗಳಿಗೆ ಆಡಳಿತಗಾರನನ್ನು ನೇಮಕ ಮಾಡಿಕೊಳ್ಳಬಹುದು.

(vii) ಶಾಶ್ವತ ಖಾಲಿ ಸ್ಥಾನವು ಉಂಟಾದಾಗ ಮತ್ತು ವಂಶಪಾರಂಪರ್ಯ ಪದದಲ್ಲಿ ಅದಕ್ಕೆ ಯಾವುದೇ ವಿವಾದವಿಲ್ಲದಿದ್ದರೆ ವಂಶಪಾರಂಪರ್ಯ ನ್ಯಾಸಧಾರಿಯ ಪದಕ್ಕೆ ಉತ್ತರಾಧಿಕಾರಿಯಾಗಲು ಹಕ್ಕುಳ್ಳ ಕುಟುಂಬದ ಸದಸ್ಯನ ಹೆಸರನ್ನು ದಾಖಲು ಮಾಡತಕ್ಕದ್ದು."

xx xx xx

**"21 ಜಿಲ್ಲಾ ಧಾರ್ಮಿಕ ಪರಿಷತ್ತು.–** (1) ರಾಜ್ಯ ಸರ್ಕಾರವು, ರಾಜ್ಯ ಧಾರ್ಮಿಕ ಪರಿಷತ್ತಿನ ಶಿಫಾರಸ್ಸಿನ ಮೇಲೆ, ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ, ಪ್ರತಿಯೊಂದು ಜಿಲ್ಲೆಗೆ ಅಥವಾ ಒಂದು ಅಥವಾ ಹೆಚ್ಚಿನ ಜಿಲ್ಲೆಗಳಿಗೆ ಈ ಮುಂದಿನ ಸದಸ್ಯರುಗಳನ್ನು ಒಳಗೊಂಡಂತೆ ಜಿಲ್ಲಾ ಧಾರ್ಮಿಕ ಪರಿಷತ್ತನ್ನು ರಚಿಸತಕ್ಕದ್ದು, ಎಂದರೆ:–

(ಎ) ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿ – ಅಧ್ಯಕ್ಷರು

(ಬಿ) ಲಭ್ಯವಿರುವೆಡೆಗಳಲ್ಲೆಲ್ಲ, ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಸಂಬಂಧಪಟ್ಟ ಸಹಾಯಕ ಆಯುಕ್ತರು, ಅಥವಾ ಜಿಲ್ಲಾಧಿಕಾರಿ ಕಚೇರಿಯ ದತ್ತಿ ತಹಶೀಲ್ದಾರರು – ಪದನಿಮಿತ್ತ ಕಾರ್ಯದರ್ಶಿ

(ಸಿ) ಮೂರು ವರ್ಷಗಳ ಅವಧಿಗಾಗಿ ಸರ್ಕಾರದಿಂದ ನಾಮನಿರ್ದೇಶಿತರಾಗಬೇಕಾದ ಸದಸ್ಯರು

(i) ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಒಬ್ಬರು ನಿವೃತ್ತ ನ್ಯಾಯಾಂಗ ಅಧಿಕಾರಿ – ಸದಸ್ಯರು

(ii) ಒಬ್ಬರು ಆಗಮ ಪಂಡಿತರು – ಸದಸ್ಯರು

(iii) ಒಬ್ಬರು ವೇದ ವಿದ್ವಾಂಸರು – ಸದಸ್ಯರು

(iv) ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡದಿಂದ ಒಬ್ಬರು – ಸದಸ್ಯರು

(v) ಒಬ್ಬರು ಮಹಿಳೆ – ಸದಸ್ಯರು

(vi) ಹಿಂದುಳಿದ ವರ್ಗಗಳಿಂದ ಒಬ್ಬರು ವ್ಯಕ್ತಿ – ಸದಸ್ಯರು

(vii) ಇಬ್ಬರು ಇತರರು – ಸದಸ್ಯರು

xx xx xx

(7) ಅಧ್ಯಕ್ಷನ ಗೈರುಹಾಜರಿಯಲ್ಲಿ, ಉಪಾಧ್ಯಕ್ಷನು ಜಿಲ್ಲಾ ಧಾರ್ಮಿಕ ಪರಿಷತ್ತಿನ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

xx xx xx

**21ಎ. ಜಿಲ್ಲಾ ಧಾರ್ಮಿಕ ಪರಿಷತ್ತಿನ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ಜಿಲ್ಲಾ ಧಾರ್ಮಿಕ ಪರಿಷತ್ತು, ನಿಯಮಿಸಬಹುದಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳು ಹಾಗೂ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(2) ಜಿಲ್ಲಾ ಧಾರ್ಮಿಕ ಪರಿಷತ್ತು, (1)ನೇ ಉಪ ಪ್ರಕರಣದಡಿಯಲ್ಲಿನ ಅಧಿಕಾರಗಳು, ಕರ್ತವ್ಯಗಳು ಮತ್ತು ಪ್ರಕಾರ್ಯಗಳಿಗೆ ಹೆಚ್ಚುವರಿಯಾಗಿ,–

(ಎ) ಒಂದು ಲಕ್ಷ ರೂಪಾಯಿಗಳು ಮತ್ತು ಅದಕ್ಕಿಂತ ಮೇಲ್ಪಟ್ಟು ಆದರೆ ಹತ್ತು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಒಟ್ಟು ವಾರ್ಷಿಕ ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗಳಿಗೆ ವ್ಯವಸ್ಥಾಪನಾ ಸಮಿತಿಯನ್ನು ರಚಿಸುವ,

(ಬಿ) 28ನೇ ಪ್ರಕರಣದಡಿಯಲ್ಲಿ ಉಪಬಂಧಿಸಲಾದಂತೆ ಒಂದು ಲಕ್ಷ ರೂಪಾಯಿಗಳು ಮತ್ತು ಅದಕ್ಕಿಂತ ಮೇಲ್ಪಟ್ಟು ಆದರೆ ಹತ್ತು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗಳ ವ್ಯವಸ್ಥಾಪನಾ ಸಮಿತಿಯನ್ನು ವಿಸರ್ಜಿಸುವ,

–ಅಧಿಕಾರವನ್ನು ಹೊಂದಿರತಕ್ಕದ್ದು.

xx xx xx

**22. ಸಲಹಾ ಸಮಿತಿಯ ಪ್ರಕಾರ್ಯಗಳು.**– ಈ ಮುಂದಿನವುಗಳು ಸಲಹಾ ಸಮಿತಿಯ ಪ್ರಕಾರ್ಯಗಳಾಗಿರತಕ್ಕದ್ದು.–

ಎ) (i) ಧಾರ್ಮಿಕ ಆಚರಣೆಗಳನ್ನು ನೆರವೇರಿಸುವುದಕ್ಕೆ;

(ii) ನಿಯಮಿಸಬಹುದಾದ ಯಾವುದೇ ಇತರ ವಿಷಯಕ್ಕೆ

– ಸಂಬಂಧಪಟ್ಟ ವಿವಾದಗಳ ಸಂಬಂಧದಲ್ಲಿ ವ್ಯವಸ್ಥಾಪನಾ ಸಮಿತಿಗಳಿಗೆ ಸಲಹೆ ನೀಡುವುದು;

ಬಿ) ಐದು ಸಾವಿರ ರೂಪಾಯಿಗಳಿಗಿಂತ ಹೆಚ್ಚು ವಾರ್ಷಿಕ ಆದಾಯವಿಲ್ಲದ ಹಿಂದೂ ಧಾರ್ಮಿಕ ಸಂಸ್ಥೆ ಅಥವಾ ಧರ್ಮಾದಾಯ ದತ್ತಿಯನ್ನು, ಅದಕ್ಕಿಂತ ದೊಡ್ಡದಾದ ಹಿಂದೂ ಧಾರ್ಮಿಕ ಸಂಸ್ಥೆ, ಧರ್ಮಾದಾಯ ದತ್ತಿ ಅಥವಾ ನ್ಯಾಸವು, ದತ್ತು ತೆಗೆದು ಕೊಳ್ಳುವುದಕ್ಕೆ ಸಂಬಂಧಿಸಿದ ಪ್ರಸ್ತಾವಗಳನ್ನು ಅನುಮೋದಿಸುವುದು ಮತ್ತು

ಸಿ) ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸುವುದು.

xx xx xx

**25. ವ್ಯವಸ್ಥಾಪನಾ ಸಮಿತಿಯ ರಚನೆ.**–(1) ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಜಿಲ್ಲಾ ಧಾರ್ಮಿಕ ಪರಿಷತ್ತು ಒಂಬತ್ತು ಜನ ಸದಸ್ಯರನ್ನು ಒಳಗೊಂಡ ಒಂದು ವ್ಯವಸ್ಥಾಪನಾ ಸಮಿತಿಯನ್ನು ರಚಿಸತಕ್ಕದ್ದು:

ಪರಂತು, ಧಾರ್ಮಿಕ ವರ್ಗಕ್ಕೆ ಮತ್ತು ಜೈನ, ಬೌದ್ಧ ಹಾಗೂ ಸಿಖ್ಖರಿಗೆ ಸೇರಿದ ಅಧಿಸೂಚಿತ ಸಂಸ್ಥೆಗಳ ಸಂಬಂಧದಲ್ಲಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ, 2011 ಪ್ರಾರಂಭವಾದ ದಿನದಿಂದ, ತಾವಾಗಿಯೇ ವ್ಯವಸ್ಥಾಪನಾ ಸಮಿತಿಯನ್ನು, ಅವರಲ್ಲಿ ಚಾಲ್ತಿಯಲ್ಲಿರುವ ರೂಢಿ ಹಾಗೂ ಆಚರಣೆಗಳಿಗೆ ಅನುಸಾರವಾಗಿ ರಚಿಸಿಕೊಳ್ಳಬಹುದು ಹಾಗೂ ಅವುಗಳನ್ನು, ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಧಾರ್ಮಿಕ ಪರಿಷತ್ತು ಮಾನ್ಯಗೊಳಿಸತಕ್ಕದ್ದು:

ಮತ್ತು ಪರಂತು, ಕಾನೂನು ಸಮ್ಮತವಾಗಿ ಪದದಲ್ಲಿದ್ದ, ನಿರಸಿತ ಅಧಿನಿಯಮದ ಅಡಿಯಲ್ಲಿ ರಚಿತವಾದ ಅಥವಾ ನೇಮಕಗೊಂಡ ಪ್ರತಿಯೊಂದು ವ್ಯವಸ್ಥಾಪನಾ ಸಮಿತಿಯು ಅಥವಾ ಪಂಚ ಸಮಿತಿಯು ಅಥವಾ ಧರ್ಮದರ್ಶಿ ಸಮಿತಿಯು ಅಥವಾ ವಂಶಪಾರಂಪರ್ಯೇತರ ನ್ಯಾಸಧಾರಿಗಳು ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದ ದಿನಾಂಕದಂದು ಆ ಪದದಲ್ಲಿರುವುದು ಮುಕ್ತಾಯವಾಗತಕ್ಕದ್ದು.

2) ಎ) ನಿಯಮಿಸಲಾದ ಪ್ರಾಧಿಕಾರವು (1)ನೇ ಉಪ-ಪ್ರಕರಣದ ಅಡಿಯಲ್ಲಿ ವ್ಯವಸ್ಥಾಪನಾ ಸಮಿತಿಯನ್ನು ರಚಿಸುವಾಗ ಸಂಸ್ಥೆ ಅಥವಾ ಅದರ ಯಾವುದೇ ಶಾಖೆಯು ಯಾವ ಧಾರ್ಮಿಕ ಸಂಪ್ರದಾಯಕ್ಕೆ ಸೇರುತ್ತದೆಯೋ ಆ ಧಾರ್ಮಿಕ ಸಂಪ್ರದಾಯಕ್ಕೆ ಸೂಕ್ತ ಮನ್ನಣೆ ನೀಡತಕ್ಕದ್ದು.

ಬಿ) ವ್ಯವಸ್ಥಾಪನಾ ಸಮಿತಿಗೆ ಸದಸ್ಯರ ನೇಮಕಾತಿಯ ವಿಧಾನ, ಅವರ ಪೂರ್ವವೃತ್ತಾಂತದ ಪರಿಶೀಲನೆ ಹಾಗೂ ಇತರ ವಿಷಯಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

ಸಿ) ಯಾವೊಬ್ಬ ವ್ಯಕ್ತಿಯು ಒಂದು ಸಮಯದಲ್ಲಿ ಒಂದಕ್ಕಿಂತ ಹೆಚ್ಚು ವ್ಯವಸ್ಥಾಪನಾ ಸಮಿತಿಗಳಿಗೆ ಸದಸ್ಯನಾಗಿ ನೇಮಕ ಹೊಂದಲು ಅರ್ಹನಾಗಿರತಕ್ಕದಲ್ಲ.

3) ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಧಾರ್ಮಿಕ ಪರಿಷತ್ತು, ಭಕ್ತರು, ದಾನಿಗಳು ಮತ್ತು ಹಿಂದೂ ಧಾರ್ಮಿಕ ಸಂಸ್ಥೆಗಳ ಅನುಯಾಯಿಗಳು ಅಥವಾ ಸಂದರ್ಭಾನುಸಾರ ಧರ್ಮಾದಾಯ ದತ್ತಿಗಳಿಗೆ ದತ್ತಿ ನೀಡಿರುವವರು ಮತ್ತು ಅವುಗಳ ಫಲಾನುಭವಿಗಳ ಪೈಕಿಯಿಂದ ಈ ಮುಂದಿನವರನ್ನು ಒಳಗೊಂಡ ಅಂಥ ರೀತಿಯಲ್ಲಿ ಒಂದು ವ್ಯವಸ್ಥಾಪನಾ ಸಮಿತಿಯನ್ನು ರಚಿಸತಕ್ಕದ್ದು, ಎಂದರೆ.–

(i) ದೇವಸ್ಥಾನದ ಸಂದರ್ಭದಲ್ಲಿ, ಪ್ರಧಾನ ಅರ್ಚಕ ಅಥವಾ ಅರ್ಚಕ.

(ii) ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದವರ ಪೈಕಿಯಿಂದ ಕೊನೆ ಪಕ್ಷ ಒಬ್ಬರು ಸದಸ್ಯರು, ಮತ್ತು

(iii) ಇತರೆ ಇಬ್ಬರು ಮಹಿಳೆಯಾಗಿರಬೇಕು ಮತ್ತು ಉಳಿದವರಲ್ಲಿ ದೇವಸ್ಥಾನದ ಪ್ರದೇಶದಲ್ಲಿ ವಾಸಿಸುವ ವ್ಯಕ್ತಿಗಳ ಪೈಕಿಯಿಂದ ಕೊನೆ ಪಕ್ಷ ಒಬ್ಬರು ಸದಸ್ಯರು.

ಪರಂತು, ರಾಜ್ಯ ಸರ್ಕಾರವು ಯಾವುದೇ ಅಧಿಸೂಚಿತ ಸಂಸ್ಥೆ ಅಥವಾ ಅಂಥ ವರ್ಗದ ಸಂಸ್ಥೆಗಳ ವಿಷಯದಲ್ಲಿ (iii)ನೇ ಖಂಡದ ಷರತ್ತನ್ನು ಮಹಿಳಾ ಸದಸ್ಯರ ಪ್ರಾತಿನಿಧ್ಯಕ್ಕೆ ಬಾಧಕವಾಗದ ರೀತಿಯಲ್ಲಿ ಸಡಿಲಿಸಬಹುದು.

ಮತ್ತು, ಪರಂತು, ಸಂಯುಕ್ತ ಸಂಸ್ಥೆಯ ಸಂದರ್ಭದಲ್ಲಿ ಹಿಂದೂ ಹಾಗೂ ಇತರೆ ಧರ್ಮಗಳೆರಡರಿಂದಲೂ ಇಬ್ಬರು ಸದಸ್ಯರನ್ನು ನೇಮಕ ಮಾಡಿಕೊಳ್ಳಬಹುದು.

(4) ಯಾವೊಬ್ಬ ವ್ಯಕ್ತಿಯು–

(ಎ) ದೇವರಲ್ಲಿ ನಂಬಿಕೆಯುಳ್ಳವನಾಗಿದ್ದ ಹೊರತು

(ಬಿ) ಅವನು ಇಪ್ಪತ್ತೈದು ವರ್ಷ ವಯಸ್ಸಿನವನಾಗಿದ್ದ ಹೊರತು;

(ಸಿ) ಒಳ್ಳೆಯ ವರ್ತನೆ ಹಾಗೂ ಹೆಸರು ಹೊಂದಿದ್ದ ಹೊರತು ಹಾಗೂ ಸಂಸ್ಥೆಯು ಇರುವ ಪ್ರದೇಶದಲ್ಲಿ ಗೌರವಕ್ಕೆ ಪಾತ್ರನಾಗಿದ್ದ ಹೊರತು;

(ಡಿ) ಯಾವುದೇ ಧರ್ಮಾದಾಯ ಸಂಸ್ಥೆ ಅಥವಾ ಹಿಂದೂ ಧಾರ್ಮಿಕ ಸಂಸ್ಥೆಯ ನಿರ್ಮಾಣ, ದುರಸ್ತಿ, ಜೀರ್ಣೋದ್ಧಾರ ಅಥವಾ ಅಭಿವೃದ್ಧಿಗೆ ಅಥವಾ ಸಂಸ್ಥೆಯಲ್ಲಿ ಯಾವುದೇ ಉತ್ಸವ ನಡೆಸಲು ಅಥವಾ ಧರ್ಮಾದಾಯಕ್ಕಾಗಿ ದಾನ ಅಥವಾ ವಂತಿಗೆ ನೀಡಿದ್ದ ಹೊರತು;

– ಒಂದು ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಮಂಡಲಿಯ ಸದಸ್ಯನಾಗಿ ನೇಮಕಗೊಳ್ಳಲು ಅರ್ಹನಾಗತಕ್ಕದ್ದಲ್ಲ.

5) ಯಾವೊಬ್ಬ ವ್ಯಕ್ತಿಯು,–

(i) ಒಂದು ಸಕ್ಷಮ ನ್ಯಾಯಾಲಯದಿಂದ ಅವಿಮುಕ್ತ ದಿವಾಳಿಯೆಂದು ಘೋಷಿತನಾಗಿದ್ದರೆ, ಅಥವಾ

(ii) ಅಸ್ವಸ್ಥ ಚಿತ್ತನಾಗಿದ್ದು ಮತ್ತು ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿಸಲಾಗಿದ್ದರೆ ಅಥವಾ ಕಿವುಡ ಅಥವಾ ಮೂಕನಾಗಿದ್ದರೆ ಅಥವಾ ಕುಷ್ಟ ಅಥವಾ ಇತರ ಯಾವುದೇ ಭಯಂಕರ ಅಥವಾ ಸಾಂಕ್ರಾಮಿಕ ಖಾಯಿಲೆಯಿಂದ ಪೀಡಿತನಾಗಿದ್ದರೆ, ಅಥವಾ

(iii) ಸಂಸ್ಥೆಯ ಯಾವುದೇ ಸ್ವತ್ತಿನ ಅಥವಾ ಮಾಡಿಕೊಳ್ಳಲಾದ ಯಾವುದೇ ಕರಾರಿನ ಸಂಬಂಧದಲ್ಲಿ ಈಗಿರುವ ಗುತ್ತಿಗೆಯಲ್ಲಿ ಸಂಸ್ಥೆಗಾಗಿ ಮಾಡಲಾದ ಕಾಮಗಾರಿಯಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷ ಹಿತಾಸಕ್ತಿ ಹೊಂದಿದ್ದರೆ ಅಥವಾ ಸಂಸ್ಥೆಗೆ ತಾನು ಕೊಡಬೇಕಾದ ಯಾವುದೇ ಪ್ರಕಾರದ ಬಾಕಿಯನ್ನು ಕೊಡದೇ ಉಳಿಸಿಕೊಂಡಿದ್ದರೆ; ಅಥವಾ

(iv) ಸಂಸ್ಥೆಯ ಪರವಾಗಿ ಅಥವಾ ವಿರುದ್ಧವಾಗಿ ಕಾನೂನು ವೃತ್ತಿಗಾರನಾಗಿ ಹಾಜರಾಗುತ್ತಿದ್ದರೆ ಅಥವಾ

(v) ನೈತಿಕ ಅಧಃಪತನವನ್ನು ಒಳಗೊಳ್ಳುವ ಒಂದು ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಶಿಕ್ಷಿತನಾಗಿದ್ದು ಮತ್ತು ಅಂಥ ಶಿಕ್ಷೆಯನ್ನು ಹಿಂತೆಗೆದುಕೊಂಡಿದಿದ್ದರೆ; ಅಥವಾ ಅಪರಾಧವನ್ನು ಕ್ಷಮಿಸಿರದಿದ್ದರೆ, ಅಥವಾ

(vi) ಯಾವಾಗಲಾದರೂ ಸಂಸ್ಥೆಯ ಹಿತಾಸಕ್ತಿಗೆ ವಿರುದ್ಧವಾಗಿ ವರ್ತಿಸಿದ್ದರೆ; ಅಥವಾ

(vii) ಅಂಥ ಸಂಸ್ಥೆಯ ಅರ್ಚಕನಾಗಿ ಅಲ್ಲದೆ ಯಾವುದೇ ಪದವನ್ನು ಧಾರಣ ಮಾಡಿದ್ದರೆ ಅಥವಾ ಒಬ್ಬ ನೌಕರನಾಗಿದ್ದರೆ ಅಥವಾ ಅಂಥ ಸಂಸ್ಥೆಯಿಂದ ಯಾವುದೇ ವೇತನ ಅಥವಾ ಅನುಷಂಗಿಕ ಲಾಭವನ್ನು ಸ್ವೀಕರಿಸುವ ವ್ಯಕ್ತಿಯಾಗಿದ್ದರೆ; ಅಥವಾ

(viii) ಮಧ್ಯಪಾನ ಅಥವಾ ಮಾದಕದ್ರವ್ಯ ಸೇವನೆಯ ದುರ್ವ್ಯಸನಿಯಾಗಿದ್ದರೆ; ಅಥವಾ

(ix) ಹಿಂದೂ ಅಲ್ಲದಿದ್ದರೆ; ಅಥವಾ ಹಿಂದೂ ಆಗಿದ್ದು ತರುವಾಯದಲ್ಲಿ ಯಾವುದೇ ಇತರ ಧರ್ಮಕ್ಕೆ ಪರಿವರ್ತಿತನಾಗಿದ್ದರೆ.

– ಅವನು ಯಾವುದೇ ಅಧಿಸೂಚಿತ ಸಂಸ್ಥೆಯ ವ್ಯವಸ್ಥಾಪನಾ ಸಮಿತಿಯ ಸದಸ್ಯನಾಗಿ ನೇಮಕಗೊಳ್ಳಲು ಅಥವಾ ಮುಂದುವರಿಯಲು ಅನರ್ಹನಾಗಿರತಕ್ಕದ್ದು.

6) ಸಮಿತಿಯ ಒಬ್ಬ ಸದಸ್ಯನು (5)ನೇ ಉಪ-ಪ್ರಕರಣದ ಅಡಿಯಲ್ಲಿ ಯಾವುದೇ ಅನರ್ಹತೆಗೆ ಒಳಗಾದರೆ ಅಥವಾ ಅನರ್ಹನಾದರೆ ಅವನು ಅಂಥ ಸದಸ್ಯನಾಗಿರುವುದು ಸಹಜವಾಗಿಯೇ ನಿಂತು ಹೋಗತಕ್ಕದ್ದು.

7) ಯಾವೊಬ್ಬ ಸದಸ್ಯನು (5)ನೇ ಉಪ-ಪ್ರಕರಣದ ಅಡಿಯಲ್ಲಿ ಯಾವುದೇ ಅನರ್ಹತೆಗೆ ಒಳಗಾದ ಬಗ್ಗೆ ಅಥವಾ ಅನರ್ಹನಾದ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ನಿಯಮಿಸಲಾದ ಪ್ರಾಧಿಕಾರವು ಸಂಬಂಧಪಟ್ಟ ವ್ಯಕ್ತಿಗೆ ಅಹವಾಲು ಹೇಳಿಕೊಳ್ಳಲು ಅವಕಾಶಕೊಟ್ಟ ತರುವಾಯ ತಾನಾಗಿಯೇ ಅಥವಾ ತನಗೆ ಬಂದ ವರದಿಯ ಮೇರೆಗೆ ಆ ಪ್ರಶ್ನೆಯನ್ನು ತೀರ್ಮಾನಿಸಬಹುದು.

**26. ವ್ಯವಸ್ಥಾಪನಾ ಸಮಿತಿಯ ಪದಾವಧಿ ಹಾಗೂ ಅಧ್ಯಕ್ಷನ ಚುನಾವಣೆ.-** (1) ನಿಯಮಿಸಲಾದ ಪ್ರಾಧಿಕಾರದ ಇಚ್ಛೆಗೆ ಒಳಪಟ್ಟು ಸದಸ್ಯರು, ಮೂರು ವರ್ಷಗಳ ಅವಧಿಯವರೆಗೆ ಆ ಅವಧಿಯಲ್ಲಿ ಸಮಿತಿಯು ವಿಘಟಿತವಾಗದಿದ್ದರೆ ಅಥವಾ ಕಾರ್ಯನಿರ್ವಹಿಸುವುದು ನಿಂತು ಹೋಗದಿದ್ದರೆ, ಪದಧಾರಣ ಮಾಡತಕ್ಕದ್ದು.

2) 25ನೇ ಪ್ರಕರಣದ ಅಡಿಯಲ್ಲಿ ವ್ಯವಸ್ಥಾಪನಾ ಸಮಿತಿಯು ರಚಿತವಾಗಿದ್ದಲ್ಲಿ, ನಿಯಮಿಸಲಾದ ಪ್ರಾಧಿಕಾರವು ಸದಸ್ಯರ ಪೈಕಿಯಿಂದ ಒಬ್ಬನನ್ನು ಅಧ್ಯಕ್ಷನನ್ನಾಗಿ ಚುನಾಯಿಸತಕ್ಕದ್ದು.

3) ರಾಜ್ಯ ಸರ್ಕಾರವು, ಕಾರ್ಯನಿರ್ವಹಣಾಧಿಕಾರಿಯನ್ನು ಯಾವುದೇ ಅಧಿಸೂಚಿತ ಸಂಸ್ಥೆ ಅಥವಾ ಸಂಸ್ಥೆಗಳ ಸಂಬಂಧದಲ್ಲಿ ವ್ಯವಸ್ಥಾಪನಾ ಸಮಿತಿಗೆ ಸಂಬಂಧಿಸಿದಂತೆ ಮತದಾನದ ಹಕ್ಕು ಹೊಂದಿರದ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯನ್ನಾಗಿ ನಾಮನಿರ್ದೇಶಿಸಬಹುದು.

xx xx xx

**28. ವ್ಯವಸ್ಥಾಪನಾ ಸಮಿತಿಯನ್ನು ವಿಘಟಿಸಲು ಅಧಿಕಾರ.-** (1) ರಾಜ್ಯ ಧಾರ್ಮಿಕ ಪರಿಷತ್ತಿಗೆ ಅಥವಾ ಸಂದರ್ಭಾನುಸಾರ ಜಿಲ್ಲಾ ಧಾರ್ಮಿಕ ಪರಿಷತ್ತಿಗೆ (2)ನೇ ಉಪ-ಪ್ರಕರಣಕ್ಕನುಸಾರವಾಗಿ ವಿಚಾರಣೆ ನಡೆಸಿದ ತರುವಾಯ, ಸಮಿತಿಯು,

(ಎ) ಈ ಅಧಿನಿಯಮದ ಉಪಬಂಧಗಳು ಅಥವಾ ಅದರಡಿಯಲ್ಲಿ ಮಾಡಿದ ನಿಯಮಗಳಿಗನುಸಾರವಾಗಿ ಕರ್ತವ್ಯಗಳನ್ನು ನಿರ್ವಹಿಸಲು ಅಥವಾ ಪ್ರಕಾರ್ಯಗಳನ್ನು ನೆರವೇರಿಸಲು ವಿಫಲವಾಗಿದೆ ಎಂದು; ಅಥವಾ

(ಬಿ) ರಾಜ್ಯ ಸರ್ಕಾರ ಅಥವಾ ಆಯುಕ್ತ, ಉಪ ಆಯುಕ್ತ ಅಥವಾ ಸಹಾಯಕ ಆಯುಕ್ತನು ಈ ಅಧಿನಿಯಮದ ಉಪಬಂಧಗಳು ಅಥವಾ ಅದರಡಿಯಲ್ಲಿ ಮಾಡಿದ ನಿಯಮಗಳ ಅಡಿಯಲ್ಲಿ ಹೊರಡಿಸಿದ ಯಾವುವೇ ಕಾನೂನು ಸಮ್ಮತ ಆದೇಶಗಳನ್ನು ಪಾಲಿಸಿಲ್ಲವೆಂದು; ಅಥವಾ

(ಸಿ) ಸಂಸ್ಥೆಯ ಅಥವಾ ದತ್ತಿಯ ಸ್ವತ್ತುಗಳ ಸಂಬಂಧದಲ್ಲಿ ಯಾವುದೇ ದುಷ್ಕೃತ್ಯ ಅಥವಾ ಅನ್ಯಾಯವೆಸಗಿದೆ ಎಂದು ಅಥವಾ ವಿಶ್ವಾಸದ್ರೋಹ ಅಥವಾ ದುರ್ವಿನಿಯೋಗದ ದೋಷಿಯೆಂದು,

- ಮನದಟ್ಟಾದರೆ, ಅದು ಸದಸ್ಯ ಅಥವಾ ವಂಶಪಾರಂಪರ್ಯ ನ್ಯಾಸಧಾರಿಯು ಒಳಗೊಂಡಂತೆ ವ್ಯವಸ್ಥಾಪನ ಸಮಿತಿಯನ್ನು ವಿಘಟಿಸಲು ಅಧಿಕಾರ ಹೊಂದಿರತಕ್ಕದ್ದು.

2) ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರ ಜಿಲ್ಲಾ ಧಾರ್ಮಿಕ ಪರಿಷತ್ತು (1)ನೇ ಉಪ ಪ್ರಕರಣದ ಅಡಿಯಲ್ಲಿ ಕ್ರಮ ಕೈಗೊಳ್ಳಲು ಉದ್ದೇಶಿಸಿದರೆ ಅಧ್ಯಕ್ಷನ ವಿರುದ್ಧ ಆರೋಪವನ್ನು ಸಿದ್ಧಪಡಿಸತಕ್ಕದ್ದು ಮತ್ತು ಅಂಥ ಆರೋಪಗಳಿಗೆ ಉತ್ತರ ನೀಡಲು ಅಥವಾ ತನ್ನ ವಿರುದ್ಧ ಒದಗಿಸಲಾದ ಸಾಕ್ಷ್ಯವನ್ನು ಪರೀಕ್ಷಿಸಲು ಮತ್ತು ಸದಸ್ಯ ಅಥವಾ ವಂಶಪಾರಂಪರ್ಯ ನ್ಯಾಸಧಾರಿಯು ಒಳಗೊಂಡುಸಮಿತಿಯ ಪರವಾಗಿ ಸಾಕ್ಷ್ಯವನ್ನು ಒದಗಿಸಲು ಅವನಿಗೆ ಅವಕಾಶ ನೀಡತಕ್ಕದ್ದು; ವಿಘಟನೆಯ ಆದೇಶದಲ್ಲಿ ಸದಸ್ಯ ಅಥವಾ ವಂಶಪಾರಂಪರ್ಯ ನ್ಯಾಸಧಾರಿಯು ಒಳಗೊಂಡು ಸಮಿತಿಯ ವಿರುದ್ಧ ಮಾಡಲಾದ ಪ್ರತಿಯೊಂದು ಆರೋಪ, ಸದಸ್ಯ ಅಥವಾ ವಂಶಪಾರಂಪರ್ಯ ನ್ಯಾಸಧಾರಿಯು ಒಳಗೊಂಡು ಸಮಿತಿಯು ನೀಡಿದ ವಿವರಣೆ ಹಾಗೂ ಅಂಥ ಆರೋಪದ ಕುರಿತ ಅಭಿಪ್ರಾಯ ಕಾರಣ ಸಹಿತವಾಗಿ ಇರತಕ್ಕದ್ದು.

3) ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರ ಜಿಲ್ಲಾ ಧಾರ್ಮಿಕ ಪರಿಷತ್ತು (2)ನೇ ಉಪ-ಪ್ರಕರಣದ ಅಡಿಯಲ್ಲಿನ ವಿಚಾರಣೆ ಬಾಕಿ ಇರುವಾಗ ಸದಸ್ಯ ಅಥವಾ ವಂಶಪಾರಂಪರ್ಯ ನ್ಯಾಸಧಾರಿಯು ಒಳಗೊಂಡ ಸಮಿತಿಯನ್ನು ಅಮಾನತ್ತಿನಲ್ಲಿರಿಸಿ 29ನೇ ಪ್ರಕರಣಕ್ಕನುಸಾರವಾಗಿ ಒಬ್ಬ ಆಡಳಿತಗಾರನನ್ನು ನೇಮಿಸಬಹುದು.

4) xx xx xx

5) ಅಪೀಲು ವಿಚಾರಣಾ ಪ್ರಾಧಿಕಾರವು ವಿಚಾರಣೆ ನಡೆಸಿದ ತರುವಾಯ ತಾನು ಯುಕ್ತವೆಂದು ಭಾವಿಸಬಹುದಾದ ಅಂಥ ಆದೇಶವನ್ನು ಮಾಡತಕ್ಕದ್ದು ಮತ್ತು ಅಂಥ ಆದೇಶವು ಅಂತಿಮವಾಗಿರತಕ್ಕದ್ದು.

**29. ಆಡಳಿತಗಾರನ ನೇಮಕಾತಿ.-** ರಾಜ್ಯ ಧಾರ್ಮಿಕ ಪರಿಷತ್ತು ಅಥವಾ ಸಂದರ್ಭಾನುಸಾರ ಜಿಲ್ಲಾ ಧಾರ್ಮಿಕ ಪರಿಷತ್ತು 28ನೇ ಪ್ರಕರಣದ (1) ಅಥವಾ (3)ನೇ ಉಪ ಪ್ರಕರಣದ ಅಡಿಯಲ್ಲಿ ವಿಘಟಿಸಲಾದ ಅಥವಾ ಅಮಾನತ್ತುಗೊಳಿಸಲಾದ ವ್ಯವಸ್ಥಾಪನಾ ಸಮಿತಿಯ ಬದಲಾಗಿ ಅಥವಾ 26ನೇ ಪ್ರಕರಣದ ಅಡಿಯಲ್ಲಿ ಸಮಿತಿಯ ಪದಾವಧಿ ಮುಕ್ತಾಯವಾದ ತರುವಾಯ ಮತ್ತು ಹೊಸ ವ್ಯವಸ್ಥಾಪನಾ ಸಮಿತಿ ರಚಿತವಾಗುವವರೆಗೆ ಅಥವಾ ಆರು ತಿಂಗಳ ಅವಧಿಯವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ರಾಜ್ಯ ಸರ್ಕಾರದ ಒಬ್ಬ ಅಧಿಕಾರಿಯನ್ನು ಆಡಳಿತಗಾರನನ್ನಾಗಿ ನೇಮಿಸತಕ್ಕದ್ದು:

ಪರಂತು, ಧಾರ್ಮಿಕ ಪರಿಷತ್ತು ಅಥವಾ ಜಿಲ್ಲಾ ಧಾರ್ಮಿಕ ಪರಿಷತ್ತು, ಲಿಖಿತದಲ್ಲಿ ಕಾರಣಗಳನ್ನು ದಾಖಲಿಸಿ, ಆದೇಶದ ಮೂಲಕ, ಸದರಿ ಅವಧಿಯನ್ನು, ಒಂದು ಸಲಕ್ಕೆ ಆರು ತಿಂಗಳನ್ನು ಮೀರದ ಹೆಚ್ಚಿನ ಅವಧಿಗೆ ವಿಸ್ತರಿಸಬಹುದು. ಆದಾಗ್ಯೂ, ಸದರಿ ಅವಧಿಯು ಒಟ್ಟಾರೆ ಒಂದು ವರ್ಷವನ್ನು ಮೀರತಕ್ಕದ್ದಲ್ಲ.

xx xx xx

**“35. ಅಧಿನಿಯಮದ ಉಪಬಂಧಗಳ ಅನ್ವಯ.**– (1) 41ನೇ ಪ್ರಕರಣವನ್ನು ಮತ್ತು VIIIನೇ ಅಧ್ಯಾಯದ ಉಪಬಂಧಗಳನ್ನು ಹೊರತುಪಡಿಸಿ ಈ ಅಧಿನಿಯಮದಲ್ಲಿ ಒಳಗೊಂಡಿರುವುದು ಯಾವುದೂ, ಧಾರ್ಮಿಕ ವರ್ಗವು ಸ್ಥಾಪಿಸಿದ, ಸಂಘಟಿಸಿದ, ನಡೆಸುವ ಅಥವಾ ನಿರ್ವಹಿಸುವ ಯಾವುದೇ ಧಾರ್ಮಿಕ ಸಂಸ್ಥೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯವಾಗುವುದಿಲ್ಲ.

(2) VIIನೇ ಅಧ್ಯಾಯದಲ್ಲಿ ಒಳಗೊಂಡಿರುವುದು ಯಾವುದೂ, ಒಂದು ಲಕ್ಷ ರೂಪಾಯಿಗಳನ್ನು ಮೀರದ ಒಟ್ಟು ವಾರ್ಷಿಕ ಆದಾಯವನ್ನು ಹೊಂದಿರುವ ಅಧಿಸೂಚಿತ ಸಂಸ್ಥೆಗೆ ಅನ್ವಯವಾಗತಕ್ಕದ್ದಲ್ಲ.”

xx xx xx

**52. ತೆಗೆದುಹಾಕುವ ಮತ್ತು ವಜಾ ಮಾಡುವ ಅಧಿಕಾರ.**–(1) ಆಯುಕ್ತನು, ಅಧಿಸೂಚಿತ ಸಂಸ್ಥೆಯಲ್ಲಿ ಹಿತಾಸಕ್ತಿಯನ್ನು ಹೊಂದಿರುವ ಯಾವೊಬ್ಬ ವ್ಯಕ್ತಿಯು ಅರ್ಜಿಯನ್ನು ಸಲ್ಲಿಸಿದ ನಂತರ ಅಥವಾ 51ನೇ ಪ್ರಕರಣದ ಅಡಿಯಲ್ಲಿ ವರದಿಯನ್ನು ಸ್ವೀಕರಿಸಿದ ನಂತರ ಅಥವಾ ತಾನಾಗೀಯೇ ಅಂಥ ಸಂಸ್ಥೆಯ ಅಧ್ಯಕ್ಷ, ವ್ಯವಸ್ಥಾಪಕ ಅಥವಾ ಅದರ ವ್ಯವಹಾರಗಳ ವ್ಯವಸ್ಥಾಪನೆಗೆ ಜವಾಬ್ದಾರನಾದ ಇತರ ಯಾವೊಬ್ಬ ವ್ಯಕ್ತಿಯು,–

ಎ) ಬಜೆಟ್ ಲೆಕ್ಕಪತ್ರಗಳು, ವರದಿ ಅಥವಾ ವಿವರ ಪಟ್ಟಿಯನ್ನು ಸಲ್ಲಿಸುವುದಕ್ಕೆ ಸತತವಾಗಿ ತಪ್ಪಿದರೆ; ಅಥವಾ

ಬಿ) ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಅಥವಾ ಅದರ ಮೇರೆಗೆ ರಚಿಸಲಾದ ನಿಯಮಗಳ ಅಡಿಯಲ್ಲಿ ಆಯುಕ್ತನು ಹೊರಡಿಸಿದ ಕಾನೂನು ಸಮ್ಮತ ಆದೇಶಗಳನ್ನು ಉದ್ದೇಶ ಪೂರ್ವಕವಾಗಿ ಉಲ್ಲಂಘಿಸಿದರೆ; ಅಥವಾ

ಸಿ) ಅಧಿಸೂಚಿತ ಸಂಸ್ಥೆಯ ಸಂಬಂಧದಲ್ಲಿ ತನ್ನ ಕರ್ತವ್ಯವನ್ನು ನಿರಂತರವಾಗಿ ನಿರ್ಲಕ್ಷಿಸಿದರೆ ಅಥವಾ ಯಾವುದೇ ದುಷ್ಕೃತ್ಯ ಅಥವಾ ಅಕ್ರಮ ಕೃತ್ಯವೆಸಗಿದರೆ ಅಥವಾ ವಿಶ್ವಾಸದ್ರೋಹ ಮಾಡಿದರೆ; ಅಥವಾ

ಡಿ) ತಾನು ಯಾವ ಅಧಿಸೂಚಿತ ಸಂಸ್ಥೆಯ ಅಧ್ಯಕ್ಷ, ವ್ಯವಸ್ಥಾಪಕ ಅಥವಾ ಸಂಸ್ಥೆಯ ವ್ಯವಸ್ಥಾಪನೆಗೆ ಸಂಬಂಧಪಟ್ಟ ಇತರ ಯಾವೊಬ್ಬ ವ್ಯಕ್ತಿಯಾಗಿರುವನೋ ಆ ಸಂಸ್ಥೆಯ ಸ್ವತ್ತನ್ನು ದುರ್ವಿನಿಯೋಗ ಮಾಡಿದರೆ ಅಥವಾ ಅದರ ಬಗ್ಗೆ ಅನುಚಿತವಾಗಿ ವ್ಯವಹರಿಸಿದರೆ; ಅಥವಾ

ಇ) ಅಧಿಸೂಚಿತ ಸಂಸ್ಥೆಯ ಸಂಬಂಧದಲ್ಲಿ ಅಧ್ಯಕ್ಷ, ವ್ಯವಸ್ಥಾಪಕ ಅಥವಾ ಅಂಥ ಇತರ ವ್ಯಕ್ತಿಯಾಗಿ ತನ್ನ ಸ್ಥಾನಕ್ಕೆ ಅಸಂಗತವಾಗಿರುವ ಯಾವುದೇ ಸ್ಥಾನವನ್ನು ಅಂಗೀಕರಿಸಿದರೆ ಅಥವಾ

ಎಫ್) ನೈತಿಕ ಅಧಃಪತನವನ್ನು ಒಳಗೊಳ್ಳುವ ಒಂದು ಅಪರಾಧದ ಸಿದ್ಧದೋಷಿಯಾಗಿದ್ದರೆ,

– ಅವನನ್ನು ತೆಗೆದುಹಾಕಬಹುದು ಅಥವಾ ವಜಾ ಮಾಡಬಹುದು.–

2) ಆಯುಕ್ತನು (1)ನೇ ಉಪ-ಪ್ರಕರಣದ ಅಡಿಯಲ್ಲಿ ಕ್ರಮ ಕೈಗೊಳ್ಳಲು ಉದ್ದೇಶಿಸಿದಾಗ, ಯಾವ ವ್ಯಕ್ತಿಯ ವಿರುದ್ಧ ಕ್ರಮವನ್ನು ಕೈಗೊಳ್ಳಬೇಕೆಂದು ಪ್ರಸ್ತಾವಿಸಲಾಗಿದೆಯೋ ಆ ವ್ಯಕ್ತಿಯ ವಿರುದ್ಧ ಆರೋಪಗಳನ್ನು ಸಿದ್ಧಪಡಿಸತಕ್ಕದ್ದು ಮತ್ತು ಅಂಥ ಆರೋಪಗಳಿಗೆ ಉತ್ತರ ನೀಡುವ ಅಥವಾ ತನ್ನ ವಿರುದ್ಧ ಒದಗಿಸಲಾದ ಸಾಕ್ಷ್ಯವನ್ನು ಪರೀಕ್ಷಿಸುವ ಮತ್ತು ತನ್ನ ಪರವಾಗಿ ಸಾಕ್ಷ್ಯವನ್ನು ಒದಗಿಸುವ ಅವಕಾಶ ಅವನಿಗೆ ಕೊಡತಕ್ಕದ್ದು. ಅವನನ್ನು ತೆಗೆದುಹಾಕುವ ಅಥವಾ ವಜಾ ಮಾಡುವ ಆದೇಶದಲ್ಲಿ ಆ ವ್ಯಕ್ತಿಯ ವಿರುದ್ಧ ರೂಪಿಸಲಾದ ಆರೋಪಗಳು, ಅವನ ವಿವರಣೆ ಮತ್ತು ಅದರ ಕಾರಣಗಳ ಸಹಿತ ಪ್ರತಿಯೊಂದು ಆರೋಪದ ಬಗ್ಗೆ ಕೈಗೊಂಡ ನಿರ್ಣಯ ಇವುಗಳನ್ನು ತಿಳಿಸತಕ್ಕದು.

3) (2)ನೇ ಉಪ-ಪ್ರಕರಣದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯ ವಿರುದ್ಧದ ವಿಚಾರಣೆಯು ಇತ್ಯರ್ಥದಲ್ಲಿದೆಯೋ ಅಂಥ ವ್ಯಕ್ತಿಯನ್ನು ಆಯುಕ್ತನು ಅಮಾನತ್ತಿನಲ್ಲಿಡಬಹುದು.

xx xx xx

**63. ಪ್ರಾದೇಶಿಕ ಕಮೀಷನರ್‌ನ ಪುನರೀಕ್ಷಣಾ ಅಧಿಕಾರಗಳು.**– (1) ಪ್ರಾದೇಶಿಕ ಕಮೀಷನರ್‌ನು, ಸಹಾಯಕ ಆಯುಕ್ತನು ಅಥವಾ ಉಪ ಆಯುಕ್ತನು ವ್ಯವಸ್ಥಾಪನ ಸಮಿತಿ ಅಥವಾ ಕಾರ್ಯನಿರ್ವಹಣಾಧಿಕಾರಿ ಅಭಿಲೇಖಿಸಿದ ಅಥವಾ ಹೊರಡಿಸಿದ ನಿರ್ಣಯ ಅಥವಾ ಆದೇಶದ ಖಚಿತತೆಯ ಬಗ್ಗೆ ಮನದಟ್ಟು ಮಾಡಿಕೊಳ್ಳುವ ಉದ್ದೇಶಕ್ಕಾಗಿ ಸಹಾಯಕ ಆಯುಕ್ತನ ಅಥವಾ ಉಪ ಆಯುಕ್ತನು, ವ್ಯವಸ್ಥಾಪನ ಸಮಿತಿ ಅಥವಾ ಕಾರ್ಯನಿರ್ವಹಣಾಧಿಕಾರಿ ಮುಂದಿರುವ ದಾಖಲೆಗಳು ಮತ್ತು ವ್ಯವಹರಣೆಗಳನ್ನು ತರಿಸಿಕೊಂಡು ಪರೀಕ್ಷಿಸಬಹುದು ಮತ್ತು ಸದರಿ ನಿರ್ಣಯ ಅಥವಾ ಆದೇಶವನ್ನು ರದ್ದುಗೊಳಿಸಬಹುದು, ವ್ಯತಿರಿಕ್ತಗೊಳಿಸಬಹುದು ಅಥವಾ ಮಾರ್ಪಡಿಸಬಹುದು ಅಥವಾ ಸ್ಥಿರೀಕರಿಸಬಹುದು ಅಥವಾ ಮತ್ತಷ್ಟು ವಿಚಾರಣೆ ನಡೆಸಲು ಅಥವಾ ತಾನು ಅಗತ್ಯವೆಂದು ಭಾವಿಸಬಹುದಾದಂಥ ಹೆಚ್ಚುವರಿ ಸಾಕ್ಷ್ಯವನ್ನು ಪಡೆಯಲು ಸಹಾಯಕ ಆಯುಕ್ತನಿಗೆ ಅಥವಾ ಉಪ-ಆಯುಕ್ತನಿಗೆ ನಿರ್ದೇಶನ ನೀಡಬಹುದು ಅಥವಾ ತಾನೇ ಹೆಚ್ಚುವರಿ ಸಾಕ್ಷ್ಯವನ್ನು ಪಡೆಯಬಹುದು.

ಪರಂತು, ಪ್ರಾದೇಶಿಕ ಕಮೀಷನರ್, ಯಾವುದೇ ಆದೇಶವನ್ನು ಅದರಿಂದ ಬಾಧಿತರಾದ ಪಕ್ಷಕಾರರಿಗೆ ಅಹವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ಹೊರತು ಅಭಿಲೇಕಿಸತಕ್ಕದ್ದಲ್ಲ ಅಥವಾ ಹೊರಡಿಸತಕ್ಕದ್ದಲ್ಲ.

2) (1)ನೇ ಉಪ-ಪ್ರಕರಣದಲ್ಲಿರುವುದಾವುದೂ, ಅಪೀಲು ಸಲ್ಲಿಸಬಹುದಾದ ಅವಧಿಯಲ್ಲಿ ಅಥವಾ ಅಂಥ ಅಪೀಲಿನ ಮೇಲೆ ಪ್ರಾದೇಶಿಕ ಕಮೀಷನರ್ ಒಂದು ಆದೇಶವನ್ನು ಹೊರಡಿಸಿದ ತರುವಾಯ ಯಾವುದೇ ಮೊಕದ್ದಮೆಯ ದಾಖಲೆಗಳನ್ನು ತರಿಸಿಕೊಂಡು ಪರೀಕ್ಷಿಸಲು ಅವನನ್ನು ಹಕ್ಕುಳ್ಳವನನ್ನಾಗಿಸತಕ್ಕದ್ದಲ್ಲ.

xx xx xx

**76. ನಿಯಮಗಳ ರಚನಾಧಿಕಾರ.**- (1) ರಾಜ್ಯ ಸರ್ಕಾರವು, ಪೂರ್ವ ಪ್ರಕಟಣೆಯ ನಂತರ ಮತ್ತು ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿ ನೆರವೇರಿಸುವ ಉದ್ದೇಶಕ್ಕಾಗಿ ಅವಶ್ಯಕವಾಗಬಹುದಾದ ಅಂಥ ನಿಯಮಗಳನ್ನು ರಚಿಸಬಹುದು.

2) ವಿಶೇಷವಾಗಿ ಮತ್ತು ಪೂರ್ವೋಕ್ತ ಉಪಬಂಧಗಳ ಸಾಮಾನ್ಯತೆಗೆ ಪ್ರತಿಕೂಲವಾಗದಂತೆ ಕೆಳಕಂಡ ಎಲ್ಲ ಅಥವಾ ಯಾವುದೇ ವಿಷಯದ ಬಗ್ಗೆ ಅಂಥ ನಿಯಮಗಳನ್ನು ರಚಿಸಬಹುದು, ಎಂದರೆ.-

ಎ) 5ನೇ ಪ್ರಕರಣದ ಅಡಿಯಲ್ಲಿ ನೇಮಕ ಮಾಡಿದ ಅಧೀನಾಧಿಕಾರಿಗಳ ಪದನಾಮ, ಅಧಿಕಾರಗಳು, ಕರ್ತವ್ಯಗಳು ಮತ್ತು ಪ್ರಕಾರ್ಯಗಳು;

ಬಿ) 12ನೇ ಪ್ರಕರಣದ ಅಡಿಯಲ್ಲಿ ಅರ್ಚಕರ ಹಾಗೂ 15ನೇ ಪ್ರಕರಣದ ಅಡಿಯಲ್ಲಿ ದೇವಸ್ಥಾನದ ನೌಕರರ ಉಪಲಬ್ಧಿಗಳು, ಕೆಲಸದ ವೇಳೆ ಮತ್ತು ಸೇವೆಯ ಷರತ್ತುಗಳು.

ಸಿ) 14ನೇ ಪ್ರಕರಣದ ಅಡಿಯಲ್ಲಿ ದೇವಸ್ಥಾನದ ನೌಕರರ ಕ್ರಮಪಟ್ಟಿ;

ಡಿ) 20ನೇ ಪ್ರಕರಣದ ಅಡಿಯಲ್ಲಿ ಸಲಹಾ ಸಮಿತಿಯ ವ್ಯವಹಾರಗಳ ನಿರ್ವಹಣೆ;

xx xx xx

## KARNATAKA LEGISLATIVE COUNCIL

### ONE HUNDRED AND SIXTEENTH SESSION

## THE KARNATAKA HINDU RELIGIOUS INSTITUTIONS AND CHARITABLE ENDOWMENTS (SECOND AMENDMENT) BILL, 2011

### (L.C. Bill No. 9 of 2011)

A Bill further to amend the Karnataka Hindu Religious Institutions and Charitable Endowments Act, 1997.

Whereas it is expedient further to amend the Karnataka Hindu Religious Institutions and Charitable Endowments Act, 1997 (Karnataka Act 33 of 2001) for the purposes hereinafter appearing;

Be it enacted by the Karnataka State Legislature in the Sixty Second year of the Republic of India as follows:-

**1. Short title and commencement.-** (1) This Act may be called the Karnataka Hindu Religious Institutions and Charitable Endowments (Second Amendment) Act, 2011.

(2) It shall come into force at once.

**2. Amendment of section 1.-** In the Karnataka Hindu Religious Institutions and Charitable Endowments Act, 1997 (Karnataka Act 33 of 2001) (hereinafter referred to as the Principal Act), in section 1,-

(1) for sub-section (4), the following shall be substituted, namely:-

"(4) It shall apply to, all religious institutions or charitable endowments notified under section 23. Section 53 and Chapter VIII shall apply to all religious institutions or charitable endowments other than those notified under section 23:

Provided that it shall not apply to a math or temple attached to or managed by math."

**3. Amendment of section 2.-** In section 2 of the Principal Act,-

(1) for clause (2), the following shall be substituted, namely:-

"(2) "Archaka" means and includes Pradhana Archaka, Assistant Archaka, pujari or other person by whatever name called who performs or conducts archane, pooja and other rituals;"

(2) for clause (15), the following shall be substituted, namely:-

"(15) "Hereditary office holder" means an office holder and "Hereditary Trustee" means a trustee of a Hindu Religious Institution or Charitable endowment, succession to whose office, devolves according to the law of succession or declared as such by any court of law, or by a statutory authority or recorded as such under any enactment;"

**4. Amendment of section 3.-** In section 3 of the Principal Act, in sub-section (3), after the words "subject to such general or special orders as the State Government", the words "or Rajya Dharmika Parishat" shall be inserted.

**5. Amendment of section 19.-** In section 19 of the Principal Act, in sub-section (1), after clause (l), the following shall be inserted, namely:-

"(m) for establishment and promotion of goshalas by Hindu Relgious Institutions or any Hindu Organisation.

(n) to meet the objects of the Act."

**6. Amendment of Chapter V.-** In Chapter V of the Principal Act, in the heading, for the words "Advisory Committee", the words "Dharmika Parishats" shall be substituted.

**7. Amendment of section 20.-** In section 20 of the Principal Act, in sub-section (1), in clause (d), for the words "three years" the words "four years" shall be substituted.

**8. Amendment of section 20A.-** In section 20A of the Principal Act,-

(1) in sub-section (2),-

(i) in clause (i), for the words "ten lakhs", the words "twenty five lakhs" shall be substituted;

(ii) in clause (vi), for the words "ten lakhs", the words "twenty five lakhs" shall be substituted.

(2) after sub-section (2), the following shall be inserted, namely:-

"(3) Administration of all religious institutions and charitable endowments shall be under the general superintendence and control of the Rajya Dharmika Parishat and such superintendence and control shall include the power to pass any order or issue any direction which may be necessary to ensure that such institutions and endowments are properly administered and their income is duly appropriated for the purpose for which they are founded or exist."

**9. Amendment of section 21.-** In section 21 of the Principal Act,

(1) in sub-section (1), in clause (c),-

(i) for the words "three years" the words "four years" shall be substituted;

(ii) in sub-clause (vii), for the words "two others", the words "three others" shall be substituted.

(2) for sub-section (7), the following shall be substituted, namely:-

"(7) In the absence of Chairman, the judicial member shall preside over the meeting."

**10. Amendment of section 21A.-** In section 21A of the Principal Act,-

(1) for sub-section (1), the following shall be substituted, namely:-

"(1) Subject to the powers of the Rajya Dharmika Parishat, the Zilla Dharmika Parishat shall have the general powers of superintendence and control over the religious institutions within the district, whose annual income does not exceed rupees twenty five lakhs and such superintendence and control shall include the power to pass any order or issue directions which may be necessary to ensure that such institutions and endowments are properly administered and their income is duly appropriated for the purposes for which they were founded or exist."

(2) in sub-section (2),-

(a) in clause (a), for the words "ten lakhs", the words "twenty five lakhs" shall be substituted;

(b) in clause (b), for the words "ten lakhs", the words "twenty five lakhs" shall be substituted;

**11. Omission of section 22.-** Section 22 of the Principal Act shall be omitted.

**12. Amendment of section 25.-** Section 25 of the Principal Act, shall be omitted and after section 25 so omitted, the following shall be inserted, namely:-

"**25. Constitution of the Committee of Management.-** (1) There shall be constituted, in respect of one or more notified institutions by the Rajya Dharmika Parishat, if the gross annual income of the notified institutions exceeds rupees twenty five lakhs and the Zilla Dharmika Parishat if the annual income does not exceed rupees twenty five lakhs, a committee of Management consisting of not more than nine members from among the devotees and followers of Hindu Religious Institutions and beneficiaries of the charitable institutions and it shall consist of,-

(i) in the case of a temple the Pradhan Archak or Archak;

(ii) at least one among the Scheduled Castes or Scheduled Tribes;

(iii) two women;

(iv) at least one from among the persons living in the locality where the institution situated:

Provided that in case of composite institution members from both Hindu and other religion may be appointed:

Provided further that the Committee of Management in respect of notified institution be constituted according to the usage and practice prevailing therein:

Provided also that every committee of Management or Pancha Committee or Dharmadarshi Committee or non hereditary trustees constituted or appointed under the repealed Acts who were lawfully holding office shall cease to hold such office from the date of commencement of the Karnataka Hindu Religious and Charitable Endowment (Second Amendment) Act, 2011.

(2) (a) The Rajya Dharmika Parishat, while constituting the Committee of Management under sub-section (1), shall have due regard to the religious denomination to which the institution or any section thereof belongs.

(b) The procedure for the constitution of Committee of Management, verification of antecedents and other matter if any, of the member shall be done in such manner as may be prescribed;

(c) No person shall be eligible to become a member in more than one Committee of Management at a time;

(d) No person, who is an office bearer of any political party at any level, shall become a member of the Committee of Management.

(3) No person shall be qualified for being appointed as member of the Committee of Management of a notified institution unless,-

(i) he has faith in God;

(ii) he has attained the age of twenty five years;

(iii) he possesses good conduct and reputation and commands respect in the locality in which the institution is situated.

(4) A person shall be disqualified for being appointed or continuing as a member of the Committee of Management of any notified institution,-

(i) if he is declared as an undischarged insolvent by a competent court; or

(ii) if he is of unsound mind and stands so declared by a competent court of law or if he is a deaf or mute or is suffering from virulent form of leprosy or contagious disease; or

